ಕನ್ನಡ ವಿಶ್ವವಿದ್ಯಾಲಯ,
ಹಂಪಿ, ವಿದ್ಯಾರಣ್ಯ, ಹೊಸಪೇಟೆ,

# ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ

# ಅರ್ಪಿಸಿದ ನಿಬಂಧ

**ಶಾಂತಿನಾಥ ದೇಸಾಯಿ ಅವರ ಕಾದಂಬರಿಗಳು – ಒಂದು ಅಧ್ಯಯನ**

ಮಧು ಬಿ.ಎಸ್
ಎಂ.ಫಿಲ್., ವಿದ್ಯಾರ್ಥಿ
ನೋಂದಣಿ ಸಂಖ್ಯೆ: ಕೆವಿಎಂಬಿಕೆಎಸ್-616

ಮಾರ್ಗದರ್ಶಕರು

**ಡಾ॥ ವೈ.ಎಸ್. ಶಿವಪ್ರಸಾದ್**
ಸಹ ಪ್ರಾಧ್ಯಾಪಕರು,
ಕ್ರೈಸ್ಟ್ ಯೂನಿವರ್ಸಿಟಿ,
ಹೊಸೂರು ರಸ್ತೆ, ಬೆಂಗಳೂರು.



ಕಾವ್ಯ ಮಂಡಲ,
ಬೆಂಗಳೂರು.

ಕನ್ನಡ ವಿಶ್ವವಿದ್ಯಾಲಯ,
ಹಂಪಿ, ವಿದ್ಯಾರಣ್ಯ, ಹೊಸಪೇಟೆ,

## ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಅರ್ಪಿಸಿದ ನಿಬಂಧ

# ಶಾಂತಿನಾಥ ದೇಸಾಯಿ ಅವರ ಕಾದಂಬರಿಗಳು – ಒಂದು ಅಧ್ಯಯನ

ಮಧು ಬಿ.ಎನ್
ಎಂ.ಫಿಲ್., ವಿದ್ಯಾರ್ಥಿ
ನೋಂದಣಿ ಸಂಖ್ಯೆ: ಕೆವಿಎಂಬಿಕೆಎಸ್-616

ಮಾರ್ಗದರ್ಶಕರು
**ಡಾ|| ವೈ.ಎಸ್. ಶಿವಪ್ರಸಾದ್**
ಸಹ ಪ್ರಾಧ್ಯಾಪಕರು,
ಕ್ರೈಸ್ಟ್ ಯೂನಿವರ್ಸಿಟಿ,
ಹೊಸೂರು ರಸ್ತೆ, ಬೆಂಗಳೂರು.

ಕಾವ್ಯ ಮಂಡಲ,
ಬೆಂಗಳೂರು.

1082

# ದೃಢೀಕರಣ ಪತ್ರ

**'ಶಾಂತಿನಾಥ ದೇಸಾಯಿ ಅವರ ಕಾದಂಬರಿಗಳು-ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಶಿವಪ್ರಸಾದ್. ವೈ.ಎಸ್.

ದಿನಾಂಕ: 20-07-2013
ಸ್ಥಳ : ಬೆಂಗಳೂರು

**ಮಾರ್ಗದರ್ಶಕರು,**
**ಡಾ॥ ವೈ.ಎಸ್. ಶಿವಪ್ರಸಾದ್,**
ಸಹ ಪ್ರಾಧ್ಯಾಪಕರು
ಕ್ರೈಸ್ಟ್ ಯೂನಿವರ್ಸಿಟಿ,
ಹೊಸೂರು ರಸ್ತೆ, ಬೆಂಗಳೂರು.

ಮುಖ್ಯಸ್ಥರು
ಕನ್ನಡ ವಿಭಾಗ
ಕ್ರೈಸ್ಟ್ ಕಾಲೇಜು, ಬೆಂಗಳೂರು - 29

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ **'ಶಾಂತಿನಾಥ ದೇಸಾಯಿ ಅವರ ಕಾದಂಬರಿಗಳು-ಒಂದು ಅಧ್ಯಯನ'** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು **ಡಾ|| ವೈ.ಎಸ್. ಶಿವಪ್ರಸಾದ್, ಸಹ ಪ್ರಾಧ್ಯಾಪಕರು, ಕ್ರೈಸ್ಟ್ ಯೂನಿವರ್ಸಿಟಿ, ಹೊಸೂರು ರಸ್ತೆ, ಬೆಂಗಳೂರು,** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ: 20-07-2013
ಸ್ಥಳ : ಬೆಂಗಳೂರು

**ಮಧು. ಬಿ.ಎನ್.**
ಸಂಶೋಧನಾ ವಿದ್ಯಾರ್ಥಿ.

# ಶಾಂತಿನಾಥ ದೇಸಾಯಿ ಅವರ ಕಾದಂಬರಿಗಳು – ಒಂದು ಅಧ್ಯಯನ

## ಶಾಂತಿನಾಥ ದೇಸಾಯಿ ಅವರ ಕಾದಂಬರಿಗಳು – ಒಂದು ಅಧ್ಯಯನ

### ಅಧ್ಯಾಯ 1 : ಉದ್ದೇಶ ವ್ಯಾಪ್ತಿ ಮತ್ತು ಮಹತ್ವ

ನವ್ಯ ಪರಂಪರೆಯ ಪ್ರಥಮ ಪ್ರತಿನಿಧಿಯಂತೆ ಕಾಣಿಸಿಕೊಂಡ ಶಾಂತಿನಾಥ ದೇಸಾಯಿ ಅವರು ಸ್ವಾತಂತ್ರೋತ್ತರ ಭಾರತದ ನವ ಸಮಾಜ ಜೀವನದ ಎಲ್ಲಾ ಏರು–ಪೇರುಗಳನ್ನು ಹತ್ತಿರದಿಂದ ನೋಡಿ ತಿಳಿದಿದ್ದರು. ನವೋದಯದವರ ಬರವಣಿಗೆಯ ಎಲ್ಲಾ ಸಾಧ್ಯತೆಗಳನ್ನು ಮುರಿದು ಕಟ್ಟುವಲ್ಲಿ ಅದಕ್ಕೊಂದು ಅಥೆಂಟಿಕ್ ಆದ ಸ್ಥಾನ ಕಲ್ಪಿಸುವ ಹಾಗೂ ಹೊಸ ಆಯಾಮವನ್ನು ಸಾಹಿತ್ಯದಲ್ಲಿ ಸೃಷ್ಟಿಸುವ ಹುಮ್ಮಸ್ಸು ಅವರಲ್ಲಿ ಇತ್ತು. ಆ ಕಾರಣಕ್ಕಾಗಿಯೇ ಅವರ ಎಲ್ಲ ಕಾದಂಬರಿ, ಸಣ್ಣಕತೆಗಳ ಬಿಡಿ ಬರಹಗಳು **ನವ್ಯ ದರ್ಶನ**ವನ್ನೇ ಮಾಡಿಸುತ್ತವೆ. ಇದೇ ಸಂದರ್ಭದಲ್ಲಿ ಸ್ವಾತಂತ್ರೋತ್ತರ ಸಾಹಿತ್ಯ ರಚನೆಯು ಕತೆ, ಕಾದಂಬರಿ, ಕವನಗಳ ಜೊತೆ ಜೊತೆಗೆ ವಿಮರ್ಶಾ ಕ್ಷೇತ್ರ ತನ್ನನ್ನು ತಾನು ಹಿಗ್ಗಿಸಿಕೊಂಡು ಬೆಳೆದದ್ದು ಇಲ್ಲಿ ಉಲ್ಲೇಖಾರ್ಹ. ಈ ರೀತಿಯ ವಿಮರ್ಶಾ ಅಧ್ಯಯನವು ಪಾಶ್ಚಾತ್ಯರಲ್ಲಿ ಬೆಳೆದಷ್ಟು ಪ್ರಬಲವಾಗಿ ನಮ್ಮಲ್ಲಿ ಬೆಳೆದಿಲ್ಲ, ಆದರೂ ನಮ್ಮಲ್ಲಿ ಈ ಅಧ್ಯಯನದ ಮಹತ್ವ ಎಂದಿಗೂ ಕಡಿಮೆಯಾಗುವುದಿಲ್ಲ.

ಶಾಂತಿನಾಥ ದೇಸಾಯಿ ಅವರ ಕೃತಿಗಳು ನವ್ಯ ಪರಂಪರೆಯಲ್ಲಿ ಹೆಚ್ಚು ಹೆಸರು ಮಾಡಿದ ಲಂಕೇಶ್, ಪೂರ್ಣಚಂದ್ರ ತೇಜಸ್ವಿಯವರಷ್ಟು ಹೆಸರು ಕೀರ್ತಿ ಗಳಿಸಲಾಗಲಿಲ್ಲ. ಅದಕ್ಕೆ ಬಲವಾದ ಕಾರಣ ಅವರು ತಮ್ಮ ಕತೆಗಳ ಮೂಲಕ ಹಾಗೂ ಕಾದಂಬರಿಗಳ ಮೂಲಕ ಪತ್ರಿಕಾ ಮಾಧ್ಯಮದಲ್ಲಿ ನಿರಂತರವಾದ ಬರವಣಿಗೆ ಕೊರತೆಯಿಂದ ಕಾಣಿಸಿಕೊಳ್ಳಲಿಲ್ಲ. ಆದ್ದರಿಂದ ಶಾಂತಿನಾಥ ದೇಸಾಯಿ ಲಂಕೇಶ್ ಮತ್ತು ಪೂರ್ಣಚಂದ್ರ ತೇಜಸ್ವಿಯವರಷ್ಟು ಪ್ರಸಿದ್ಧಿ ಪಡೆಯಲಿಲ್ಲ.

ದೇಸಾಯಿ ಅವರು ಪೂರ್ಣಚಂದ್ರ ತೇಜಸ್ವಿಯಂತೆ ಸಾಹಿತ್ಯ ಹಿನ್ನೆಲೆಯ ಕುಟುಂಬದಿಂದ ಬಂದವರಾಗಿರಲಿಲ್ಲ ಹಾಗೂ ಲಂಕೇಶ್‌ರಂತೆ ಅವರ ಕೈಯಲ್ಲಿ ಯಾವುದೇ ಜನಪ್ರಿಯವಾದ ಪತ್ರಿಕೆ ಇರಲಿಲ್ಲ. ಆದ್ದರಿಂದ ಶಾಂತಿನಾಥ ದೇಸಾಯಿ ಜನಮಾನಸದಲ್ಲಿ ನಿರಂತರವಾಗಿ ಉಳಿಯಲಾಗಲಿಲ್ಲ.

ದೇಸಾಯಿ ಅವರು ನವ್ಯ ಸಾಹಿತ್ಯದ ಅಷ್ಟೂ ಅಂಶಗಳನ್ನು ಕತೆ ಕಾದಂಬರಿಗಳಲ್ಲಿ ತಂದಿದ್ದರಿಂದ ನಿಸ್ಸಂಶಯವಾಗಿ ಒಬ್ಬ ಉತ್ತಮ ಲೇಖಕರೆನಿಸಿದ್ದಾರೆ. ದೇಸಾಯಿ ಅವರು ಹೆಚ್ಚು ಜನಪ್ರಿಯರಾಗದಿದ್ದುದೆ ಕಾರಣವಾಗಿ, ಅವರ ಬರವಣಿಗೆಗಳು ಹೆಚ್ಚು ಸಂಶೋಧನೆಗೆ ಒಡ್ಡಿಕೊಳ್ಳಲಿಲ್ಲ. ಆದ್ದರಿಂದ ಶಾಂತಿನಾಥ ದೇಸಾಯಿ ಅವರ ಬರವಣಿಗೆಯನ್ನು ಸಂಶೋಧನೆಯ ಒರೆಗಲ್ಲಿಗೆ ಹಚ್ಚಬೇಕಾಗಿದೆ. ಅವರ ಒಟ್ಟಾರೆ ಸಾಹಿತ್ಯದ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಬೇಕಿದೆ.

ಶಾಂತಿನಾಥ ದೇಸಾಯಿ ಅವರ ಕೃತಿ ವಿಮರ್ಶೆಗೆ ಪ್ರಮುಖ ಕಾರಣವೆಂದರೆ ಅವರೊಬ್ಬ ಮಹತ್ವದ ಬರಹಗಾರರು ಮತ್ತು ಅವರ ಬರವಣಿಗೆಗಳನ್ನು ಆಧುನಿಕ ವಿಮರ್ಶಾ ಕ್ಷೇತ್ರದ ಇತ್ತೀಚಿನ ಬೆಳವಣಿಗೆಗಳಾದ ಅಂತರ್‌ಶಿಸ್ತೀಯ ದೃಷ್ಟಿಕೋನದಿಂದ ಪರಿಶೀಲಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಶಾಂತಿನಾಥ ದೇಸಾಯಿ ಅವರ ಏಳು ಕಾದಂಬರಿಗಳು ಮತ್ತು ಹಲವಾರು ಸಣ್ಣಕತೆಗಳ ಸಂಕಲನಗಳು, ಇಂಗ್ಲೀಷ್ ಬರಹಗಳು ಕೆಲವು ವಿಮರ್ಶಾ ಲೇಖನಗಳು ಇವೆಲ್ಲವನ್ನು ವಿಮರ್ಶೆಯ ವ್ಯಾಪ್ತಿಗೆ ಒಳಪಡಿಸುವುದು ಕಷ್ಟಸಾಧ್ಯವಾಗಿರುವುದರಿಂದ ಕೇವಲ ಕಾದಂಬರಿಗಳನ್ನಷ್ಟೆ ವಿಮರ್ಶಿಸಲು ನಿರ್ಧರಿಸಲಾಗಿದೆ. ಈ ನಿಬಂಧದ ವ್ಯಾಪ್ತಿ ಕೇವಲ ಕಾದಂಬರಿಗಳಿಗಷ್ಟೇ ಸೀಮಿತವಾಗಿದೆ. ಇವರು ಬರೆದ ಏಳು ಕಾದಂಬರಿಗಳು ವಿಮರ್ಶೆಗೆ ಅಗತ್ಯ ಪ್ರಮಾಣದ ಸರಕು ಸಿಗುವಂತೆ ಮಾಡಿರುವುದಲ್ಲದೆ ಇವರ ಸಮಕಾಲೀನರು ಕೂಡ ನವ್ಯ ಸಾಹಿತ್ಯದ ಸೈದ್ಧಾಂತಿಕ ನಿಲುವುಗಳ ಬರಹಗಾರರಾಗಿರುವುದರಿಂದ ಮತ್ತು ಈ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿರುವುದರಿಂದ ಹೊಸ ಒಳನೋಟಗಳನ್ನು ಕಾಣ ಬಹುದಾಗಿದೆ.

ನವ್ಯ ಸಾಹಿತ್ಯದಲ್ಲಿ ಮಾತ್ರವಲ್ಲದೆ ವಿಶೇಷವಾಗಿ ಕನ್ನಡ ಸಾಹಿತ್ಯದಲ್ಲೂ ದೇಸಾಯಿ ಅವರ ಸ್ಥಾನವನ್ನು ನಿರ್ಧರಿಸಬೇಕಾಗಿದೆ. ಕಾದಂಬರಿಕಾರರಾಗಿ ಶಾಂತಿನಾಥ ದೇಸಾಯಿ ಅವರ ಕಾದಂಬರಿಗಳ ಬಗ್ಗೆ ಆಳವಾದ ಚರ್ಚೆ ಮತ್ತು ಅಂತರ್‌ಶಿಸ್ತೀಯ ವಿಮರ್ಶೆ ನಡೆದಿಲ್ಲವಾಗಿ ಅದನ್ನು ಕೈಗೊಳ್ಳಲೇಬೇಕಾದ ಜರೂರು ಈ ಕಾಲಘಟ್ಟದಲ್ಲಿ ಕಾಣಿಸಿಕೊಂಡಿದೆ. ನವ್ಯ ಸಾಹಿತ್ಯದ ವಕ್ತಾರರಾಗಿ ಗುರುತಿಸಿ ಕೊಂಡಿರುವ ದೇಸಾಯಿ ಅವರ ಕಾದಂಬರಿಗಳ ಪರಿಧಿಯನ್ನು ಅಧ್ಯಯನದ ಮೂಲಕ ಬೆಳಕಿಗೆ ತರುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಲಾಗಿದೆ ಹಾಗೂ ಈ ನಿಬಂಧದ ಸ್ವರೂಪವು ಕಾದಂಬರಿಗಳಿಗೆ ಮಾತ್ರ ಸೀಮಿತವಾಗಿದೆ.

**ಅಧ್ಯಾಯ 2 : ಆಧುನಿಕ ಕನ್ನಡ ಸಣ್ಣಕತೆ ಹಾಗೂ ಕಾದಂಬರಿಗಳ ವಿಕಾಸ :**

ಯಾವುದೇ ಸಾಹಿತ್ಯ ಚಳವಳಿ ಕೆಲವು ಉನ್ನತ ಆದರ್ಶಗಳನ್ನೂ ಅವುಗಳ ಸಾಧನೆಗೆ ಬೇಕಾದ ಧೋರಣೆಗಳನ್ನೂ ತನ್ನ ಧ್ಯೇಯೋದ್ದೇಶವನ್ನಾಗಿ ಇಟ್ಟುಕೊಂಡಿರುತ್ತದೆ. ಈ ದೃಷ್ಟಿಯಿಂದ ನೋಡಿದಾಗ ನವೋದಯವನ್ನು ಒಂದು ಚಳವಳಿಯನ್ನಾಗಿ ಪರಿಗಣಿಸಲಕ್ಕೆ ಆಗುವುದಿಲ್ಲ. ಬ್ರಿಟಿಷ್ ರೊಮ್ಯಾಂಟಿಕ್ ಸಾಹಿತ್ಯದ ಕೆಲವು ಧ್ಯೇಯ ಧೋರಣೆಗಳನ್ನು, ನವೋದಯ ಮುಂದಿಟ್ಟು ಕೊಂಡಿದ್ದಿತಾದರೂ, ವರ್ಡ್ಸ್‌ವರ್ತ್ ಪ್ರಾರಂಭಿಸಿದ ರೊಮ್ಯಾಂಟಿಸಿಸಮ್‌ಗೂ, ನಮ್ಮಲ್ಲಿ ಆಕೃತಿಗೊಳ್ಳಲು ಯತ್ನಿಸಿದ ನವೋದಯಕ್ಕೂ ತುಂಬಾ ವ್ಯತ್ಯಾಸವಿದೆ. ಕೇವಲ ಸತ್ಯ, ಶಿವ, ಸೌಂದರ್ಯಂತಹ ಆದರ್ಶಗಳ ಕಡೆಗೆ ಮಾತ್ರವೇ ಪ್ರತಿಯಬ್ಬ ಲೇಖಕನೂ ಗಮನ ಹರಿಸಿದುದು ನಮಗೆ ಸ್ವಾತಂತ್ರ್ಯ ಪೂರ್ವ ನವೋದಯ ಸಾಹಿತ್ಯದ ಮುಖ್ಯಧ್ವನಿಯಾಗಿ ಕಂಡುಬರುತ್ತದೆ. ಅಖಿಲ ಭಾರತ ಮಟ್ಟದಲ್ಲಿ ಬಂಕಿಮ್‌ಚಂದ್ರ, ಶರತ್ ಚಂದ್ರ, ರವೀಂದ್ರನಾಥ ಠಾಕೂರ್ ಮತ್ತುಮುಲ್ಕ್‌ರಾಜ್ ಆನಂದ್, ರಾಜಾರಾವ್ ಅಂಥವರ ಕೃತಿಗಳಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಕಂಡುಬರುವ ಯಾವುದೇ ಸ್ವಾತಂತ್ರ್ಯಪರ ಧೋರಣೆ ಕನ್ನಡ ನವೋದಯ ಸಾಹಿತ್ಯದಲ್ಲಿ ಕಂಡುಬರುವುದಿಲ್ಲ. ಅಲ್ಲಲ್ಲಿ ಕಂಡುಬರುವ **ನರಬಲಿ** (ಬೇಂದ್ರೆ), **ಪಾಂಚಜನ್ಯ, ನನ್ನ ದೇವರು** (ಕುವೆಂಪು), **ಗಂಡುಗೊಡಲಿ** (ರಾಜರತ್ನಂ) ಇಂತಹ ಸ್ವಾತಂತ್ರ್ಯಪರ ಖಚಿತ ಅಭಿಪ್ರಾಯದ ಕೃತಿಗಳು ತೀರ ವಿರಳ.

ಈ ಹಿನ್ನೆಲೆಯಲ್ಲಿ ನೋಡಿದಾಗ. ಸ್ವಾತಂತ್ರ್ಯೋತ್ತರ ಕಾಲದ ನವೋದಯ ಸಾಹಿತ್ಯದಲ್ಲಿ, ಒಂದು ದಿಟ್ಟ ನಿಲುವು ಸ್ಪಷ್ಟ ಧೋರಣೆ ಇವುಗಳನ್ನು ಕಂಡುಕೊಳ್ಳುವುದು ಕಷ್ಟಸಾಧ್ಯವಾಗುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಹೇಗೋ, ಸ್ವಾತಂತ್ರ್ಯಾ ನಂತರವೂ ಕೂಡ ನವೋದಯಕ್ಕೆ ಒಂದು ನಿಶ್ಚಿತ ಚೌಕಟ್ಟು ಇಲ್ಲದಿರುವುದು ಗಮನಾರ್ಹ. ಸ್ವಾತಂತ್ರ್ಯಪೂರ್ವದಲ್ಲಿ ಹೇಗೋ ಹಾಗೆ, ವಿಭಿನ್ನ ನೆಲೆ–ವಿಭಿನ್ನ ಧೋರಣೆಯ ಸಾಹಿತ್ಯ 'ನವೋದಯ' ಎಂಬ ಹಣೆಪಟ್ಟಿಯಲ್ಲಿ ದಾಖಲಾಯಿತು.

ಸ್ವಾತಂತ್ರ್ಯನಂತರದಲ್ಲಿ ಮಾಸ್ತಿಯವರು ಅನೇಕ ಕತೆಗಳನ್ನು ಬರೆದರು. ಆನಂದರ ಕತೆಗಳಲ್ಲಿ, ಅಶ್ವತ್ಥರ ಕತೆಗಳಲ್ಲಿ ಕಂಡುಬರುವ ವಿವರಗಳನ್ನು ನೋಡಿದಾಗ, ಮೇಲಿನ ವಿವರಣೆಯ ಸತ್ಯಾಸತ್ಯತೆ ತಿಳಿದುಬರುತ್ತದೆ.

ಸ್ವಾತಂತ್ರ್ಯನಂತರದಲ್ಲಿ ಜನಜೀವನ ಚಿತ್ರಿಸುವಲ್ಲಿ ನಮ್ಮ ಲೇಖಕರಲ್ಲಿ ಒಂದು ಬಗೆಯ ಮೌಲ್ಯಚ್ಛೇದ ಉಂಟಾಯಿತೆ ? ಎಂಬ ಪ್ರಶ್ನೆ ಮೂಡುತ್ತದೆ. ಹೀಗಾಗುವುದಕ್ಕೆ ಕಾರಣವೇನು ? **ತಾಯಿ ಮತ್ತು ಮಗ** ಕತೆಯನ್ನೇ ತೆಗೆದುಕೊಳ್ಳಿ, ಮಾಸ್ತಿಯವರ ಈ ಕತೆಯಲ್ಲಿ ಬರುವ ಪಾದ್ರಿ, ಕ್ರಿಶ್ಚಿಯನ್ ಮೌಲ್ಯಗಳನ್ನಷ್ಟೇ ಅಲ್ಲ, ಪಾಶ್ಚಾತ್ಯ ಮೌಲ್ಯಗಳನ್ನೂ ತಕ್ಕಮಟ್ಟಿಗೆ ಪ್ರತಿನಿಧಿಸುತ್ತಾನೆ. ಆದರೆ ಎರಡು ಸಂಸ್ಕೃತಿಗಳ ಮೌಲ್ಯಮಾಪನ ಎಂಬ ರೀತಿಯಲ್ಲಿ ಕತೆ ಮುಗಿಯುತ್ತದೆ. ಇದರಲ್ಲಿ ಸ್ವಾತಂತ್ರ್ಯೋತ್ತರದ ಪ್ರಶ್ನೆಯ ನೆರಳೂ ಸುಳಿಯುವುದಿಲ್ಲ. ಮಾಸ್ತಿಯವರೆ ಮೆಚ್ಚಿ ಪ್ರಕಟಿಸಿದ ಬಾಗಲೋಡಿ ದೇವರಾಯರ ಕಥಾ ಸಂಗ್ರಹದಲ್ಲಿಯೂ (ಹುಚ್ಚು ಮುನೀಫ ಮತ್ತು ಇತರ ಕಥೆಗಳು) ನಮಗೆ ಎದುರಾಗಿರುವುದು ಸಮಕಾಲೀನ ರಾಜಕೀಯ, ಸಾಮಾಜಿಕ ಪರಿಸರದಿಂದ ದೂರವಾದ ಪ್ರಪಂಚ.

ನವೋದಯ ಸಣ್ಣಕತೆಗಾರರಲ್ಲಿ ಪ್ರಮುಖರಾದ ಕತೆಗಾರರು ಆನಂದ, ಅಶ್ವತ್ಥ, ಬಾಗಲೋಡಿ ದೇವರಾಯ, ಮಾಸ್ತಿ ಮತ್ತಿತರರು ಇವರೆಲ್ಲ ನಮಗೆ ಸ್ವಾತಂತ್ರ್ಯನಂತರದಲ್ಲಿ ಕಾಲದಲ್ಲಿ ತಮ್ಮ ಕತೆಗಳಿಂದ ತೃಪ್ತಿಯನ್ನು ನೀಡುವುದಿಲ್ಲ.

ಈ ದೃಷ್ಟಿಯಿಂದ ನೋಡಿದಾಗ, ನವೋದಯದ ಪ್ರವಾಹದಿಂದ ಬೇರೆಯಲ್ಲದಿದ್ದರೂ, ತಮ್ಮದೇ ವಿಶಿಷ್ಟ ಆದರ್ಶಗಳನ್ನು ಹೊಂದಿದ್ದ ಪ್ರಗತಿಶೀಲರು, ತಮ್ಮ ಕತೆಗಳಲ್ಲಿ, ಸ್ವಾತಂತ್ರ್ಯನಂತರದ ಜೀವನ ಶೈಲಿಯನ್ನು ಬಿಂಬಿಸುವ ಕತೆಗಳನ್ನು ಬರೆದಿದ್ದಾರೆ.

ಮೊದಲಿಗೆ, ಚದುರಂಗರ ಕತೆಗಳನ್ನು ನೋಡಬಹುದು. ಅವರ **ತುಚೀಪ್, ತುಂದಾಡ್, ತುಬದ್‌ರೆಡೀ** ಕತೆಗೆ ಸ್ವಾತಂತ್ರ್ಯಪೂರ್ವ, ಸ್ವಾತಂತ್ರ್ಯಾನಂತರ ಎಂದು ವಿಭಿನ್ನತೆ ಕಂಡುಬರುವುದಿಲ್ಲ. ಆದರೆ, **ಮರಳಿ ಅಲ್ಲಿಗೇ** ಎಂಬ ಲೈನ್‌ಮನ್ ಒಬ್ಬನ ಜೀವನವನ್ನು ಚಿತ್ರಿಸುವ ಕತೆಯಲ್ಲಿ ಅಂದಿನ ಸಮಕಾಲೀನ ಸಮಾಜದ ಚಿತ್ರಣ ಮೂಡಿಬರುತ್ತದೆ. ಹಳ್ಳಿಗನೊಬ್ಬ ತನ್ನದೇ ಪರಿಸರದಲ್ಲಿ ಬಾಳಿ ಬದುಕುತ್ತಿದ್ದವನು, ನಗರೀಕರಣದಿಂದ, ನಗರವೊಂದರಲ್ಲಿ ಕ್ಷುದ್ರ ಜೀವನ ನಡೆಸಬೇಕಾಗಿ ಬರುವುದಷ್ಟೇ ಅಲ್ಲ; ಅಲ್ಲಿನ ಯಥಾಸ್ಥಿತಿಯನ್ನು ಗತ್ಯಂತರವಿಲ್ಲದೆ, ಒಪ್ಪಿಕೊಳ್ಳಬೇಕಾದ ಚಿತ್ರಣ, ಸ್ವಾತಂತ್ರ್ಯಾನಂತರದ ಸಮಾಜದ ಒಂದು ಪ್ರಭಾವಕಾರೀ ಚಿತ್ರಣ. **ಶವದ ಮನೆ** ಅವರ ಇನ್ನೊಂದು ಪ್ರಸಿದ್ಧ ಕತೆ, ಇಲ್ಲಿಯೂ ಕೂಡ, ಸಮಕಾಲೀನತೆಯ ಪ್ರಶ್ನೆ ಕಂಡುಬರುವುದಿಲ್ಲ. ಇದಕ್ಕೆ ಹೋಲಿಸಿದಾಗ, ಛಿದ್ರವ್ಯಕ್ತಿತ್ವದ ವಸ್ತುವನ್ನು ಹೊಂದಿರುವ **ಭೂತದ ಚೇಷ್ಟೆ** ಹೆಚ್ಚಿನ ಸಮಕಾಲೀನ ಮೌಲ್ಯವನ್ನು ಬಿಂಬಿಸುತ್ತದೆ. ಈ ಕತೆಯಲ್ಲಿ ಅಬ್‌ನಾರ್ಮಲ್ ಸೈಕಾಲಜಿ ಬಗ್ಗೆ ಇನ್ನಿಲ್ಲದಷ್ಟು ಚರ್ಚೆ ಹಾಗೂ ವಿವರಗಳು

ಕಂಡುಬರುತ್ತವೆ. ಇವು ಕತೆಯ ಒಂದು ಮಗ್ಗುಲನ್ನು ಬಿಂಬಿಸಿದರೆ, ವರದಕ್ಷಿಣೆ ಸಮಸ್ಯೆಯ ಇನ್ನೊಂದು ಮಗ್ಗುಲನ್ನು ಬಿಂಬಿಸುತ್ತದೆ. ಚದುರಂಗರು ಈ ಕತೆಯ ಕೇಂದ್ರಸ್ಥಾನವನ್ನು ಅತ್ಯಂತ ಸಮಕಾಲೀನ ಅಂದರೆ ನಿರ್ದಿಷ್ಟ ಕಾಲಬದ್ಧ ಎನ್ನುವಂತೆ ಮಾಡಿರುವುದು ಈ ಕತೆಯ ಹೆಗ್ಗಳಿಕೆಗಳಲ್ಲಿ ಒಂದು ಎಂದು ಹೇಳಬಹುದು.

ಕತೆಗಾರರಾಗಿ ನಿರಂಜನರು ಸ್ವಾತಂತ್ರ್ಯಪೂರ್ವದಲ್ಲಿ ಕೂಡ, ಅಂದಂದಿನ ರಾಜಕೀಯ ಬೆಳವಣಿಗೆಗಳ ವಿಸ್ತೃತವಾದ ಪರಿಣಾಮಗಳನ್ನು ತಮ್ಮ ಕತೆಗಳಲ್ಲಿ ದುಡಿಸಿಕೊಂಡರು ಎನ್ನುವುದಕ್ಕೆ **ರಕ್ತ ಸರೋವರ** ಒಂದು ಉತ್ತಮ ಉದಾಹರಣೆ. ಕಾಶ್ಮೀರದಲ್ಲಿ ನಡೆಯುವ ಈ ಕತೆ ಬಹುಶ: ಒಂದು ವರದಿಯನ್ನು ಆಧರಿಸಿದ ಕತೆ ಇರಬಹುದು. ಆದರೆ ಸನ್ನಿವೇಶದ ಪುನರ್‌ನಿರ್ಮಾಣದಲ್ಲಿ ದೂರದ ಕಾಶ್ಮೀರ ಮತ್ತು ಅದರ ಎಲ್ಲ ಜೀವಂತ ವೈರುಧ್ಯಗಳನ್ನು ಮಾತಿನಲ್ಲಿ ಕಟ್ಟಿಕೊಡುವುದರಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ.

ನವೋದಯ ಸಣ್ಣಕತೆಗಾರರಲ್ಲಿ ಹಲವರು ಹಲವು ಕಾರಣಗಳಿಗಾಗಿ ಗಮನ ಸೆಳೆದಿದ್ದಾರೆ. ಕೊಡಗಿನ ಗೌರಮ್ಮ, ಕೃಷ್ಣಕುಮಾರ ಕಲ್ಲೂರ, ಮಿರ್ಜಿ ಅಣ್ಣಾರಾಯ ಮೊದಲಾದವರು ಮಾನವನ ಬದುಕಿನಲ್ಲಿ ಕಂಡುಬರುವ ಚೆಲುವನ್ನೂ, ಮಾನವೀಯ ಮೌಲ್ಯಗಳನ್ನೂ ನಿರೂಪಿಸಿದ್ದಾರೆ. ಭಾರತೀಪ್ರಿಯರ ಹೆಸರು ಸಣ್ಣ ಕಥೆಯ ಕಲೆಗಾರಿಕೆಯ ದೃಷ್ಟಿಯಿಂದ ಗಮನಾರ್ಹ. ಅದರಲ್ಲೂ **ರುದ್ರವೀಣೆ** ಸಂಗ್ರಹದಲ್ಲಿರುವ ಅವರ **ಮೋಚಿ** ಸಣ್ಣ ಕಥೆ ಚಪ್ಪಲಿ ಹೊಲಿಯುವ ಸಾಮಾನ್ಯನೊಬ್ಬನ ಅಂತರಂಗದ ಸ್ವಾಭಿಮಾನವನ್ನು ಆಕರ್ಷಕವಾಗಿ ಚಿತ್ರಿಸುತ್ತದೆ.

ಕನ್ನಡದ ಪ್ರಗತಿಶೀಲ ಚಳುವಳಿ, ಅಖಿಲ ಭಾರತದ ಚಳುವಳಿಯ ಭಾಗವಾಗಿ ಬಂದಿತು. 1936ರಲ್ಲಿ ಲಖ್ನೋದಲ್ಲಿ ಪ್ರಗತಿಶೀಲ ಲೇಖಕರ ಮೊದಲ ಸಮ್ಮೇಳನ ನಡೆಯಿತು, ಪ್ರೇಮಚಂದರು ಅಧ್ಯಕ್ಷರು. ಕನ್ನಡದಲ್ಲಿ ಇದನ್ನು ಘೋಷಣೆಯೊಂದಿಗೆ ಪ್ರಾರಂಭಿಸಿದವರು ಅ.ನ.ಕೃಷ್ಣರಾಯರು. ಅವರ ನಾಯಕತ್ವವನ್ನು ಒಪ್ಪಿಯೋ ಅಥವಾ ಹೊರಗುಳಿದೋ ಪ್ರಗತಿಶೀಲ ಚಳುವಳಿಯಲ್ಲಿ ಭಾಗವಹಿಸಿದವರು ತ.ರಾ.ಸು., ಬಸವರಾಜ ಕಟ್ಟೀಮನಿ, ಚದುರಂಗ, ಅರ್ಚಕ ವೆಂಕಟೇಶ, ಎಸ್. ಅನಂತನಾರಾಯಣ, ಕುಮಾರ ವೆಂಕಣ್ಣ, ಕೋ. ಚನ್ನಬಸಪ್ಪ ಮೊದಲಾದವರು. ಕಾದಂಬರಿ ಮತ್ತು ಸಣ್ಣಕಥೆಯ ಪ್ರಕಾರಗಳನ್ನು ಪ್ರಗತಿಶೀಲ ಪಂಥ ಬಹುಮಟ್ಟಿಗೆ ಬಳಸಿಕೊಂಡಿತು. ಅ.ನ.ಕೃ. ಸಂಪಾದಿಸಿ, ಎರಡು ಭಾಗಗಳಲ್ಲಿ ಪ್ರಕಟಿಸಿದ, **ಕಾಮನ ಬಿಲ್ಲು** ಸಂಗ್ರಹದಲ್ಲಿ ಇತರೆ ಭಾಷೆಗಳ ಪ್ರಗತಿಶೀಲ ಮನೋಧರ್ಮದ ಕಥೆಗಳು ಕನ್ನಡಕ್ಕೆ ಅನುವಾದವಾದವು.

ಅ.ನ.ಕೃ. ಅವರ **ಆಚಾರ್ರ ಮದುವೆ, ಬೆಲೆ ಕಟ್ಟುವವರು ಯಾರು?, ಮಣ್ಣಿನ** ಮಗ, ತ.ರಾ.ಸು. ಅವರ ಅತ್ಯುತ್ತಮ ಕಥೆ **೦-೦=೦, ತೊಟ್ಟಿಲು ತೂಗಿತು, ಹೆಣ್ಣು ಮಣ್ಣು, ಒಂದು ತುಂಡು ಸುದ್ಧಿ**ಯಂತಹ ಕೆಲವೇ ಒಳ್ಳೆಯ ಪ್ರಗತಿಶೀಲ ಕಥೆಗಳನ್ನು ಬರೆದರು. ಪ್ರಗತಿಶೀಲ ಮನೋಧರ್ಮವೇ ರಕ್ತಗತವಾಗಿ ಬಸವರಾಜ ಕಟ್ಟೀಮನಿ, ನಿರಂಜನ ಅನೇಕ ಕಥೆಗಳನ್ನು ಬರೆದರು. ಕಟ್ಟೀಮನಿಯವರ **ಬೂಟ್ ಪಾಲಿಷ್**ನಂತಹ ಕಥೆಯಲ್ಲಿ ಅತಿಭಾವುಕತೆ ರಾಚುತ್ತದೆ. ಆದರೆ ಅವರು **ಗಿರಿಜಾ ಕಂಡ ಸಿನಿಮಾ** ಒಂದು ಉತ್ತಮ ಉದಾಹರಣೆ. ಸಿನಿಮಾ ಮಂದಿರದಲ್ಲಿ ಬೆಳ್ಳಿ ಪರದೆಯ ಮೇಲೆ ಕೃತಕ ಜಗತ್ತನ್ನು ಕಾಣಲು ಹೊರಟ ಮುಗ್ಧೆ ಸಿನಿಮಾ ಮಂದಿರದಾಚೆ ತಾನು ಆವರೆಗೆ ಕಾಣದಿದ್ದ ವಾಸ್ತವಿಕ ಜಗತ್ತನ್ನು ಕಾಣುವುದು ಒಂದು ವಿಶಿಷ್ಟವಾದ ಅಂಶ.

ನಿರಂಜನರ **ಕೊನೆಯ ಗಿರಾಕಿ** ಈ ಪಂಥದ ಅತ್ಯುತ್ತಮ ಕೊಡುಗೆ. ಹೊರ ಜಗತ್ತಿನ ವಿವರಗಳನ್ನು ಕೊಡುತ್ತಲೇ ಶೋಷಣೆಗೆ ವಸ್ತುವಾದ ಮೂಕ ಹೆಣ್ಣು, ಅವಳ ಹೆಣದ ಮೇಲೆ ಸುತ್ತುವ ಗಿಡುಗ ಎರಡನ್ನೂ ಸಂಕೇತಗಳನ್ನಾಗಿ ರೂಪಿಸಿ, ವಿಶಿಷ್ಟ ಸಂಯಮದಿಂದ ಆಧುನಿಕ ಸಣ್ಣಕಥಾಸಾಹಿತ್ಯದ ಉತ್ತಮ ಕಥೆಗಳಲ್ಲಿ ಒಂದನ್ನು ನಿರಂಜನ ಬರೆದರು. ಅವರ ಅನೇಕ ಕಥೆಗಳಲ್ಲಿ ಪಾತ್ರಗಳು ಒಂದು ಸಿದ್ಧಾಂತದ ಅಗತ್ಯಗಳನ್ನು ಪೂರೈಸುತ್ತವೆ ಅಷ್ಟೆ ಎನ್ನುವುದು ನಿಜ. **ನಂ.208, ನೀಲಿ, ಬುಷ್‌ಕೋಟ್**ನಂತಹ ಹಲವು ಒಳ್ಳೆಯ ಕಥೆಗಳು ಜನತೆಯ ಹೋರಾಟ, ಸಾಮಾಜಿಕ ಶೋಷಣೆ ಇಂತಹ ವಸ್ತುಗಳಿಗೆ ಮಾನವೀಯ ಆಯಾಮಗಳನ್ನು ನೀಡಿದವರು. ಪ್ರಗತಿಶೀಲರ ಚೌಕಟ್ಟಿನೊಳಗೆ ಹಲವು ಒಳ್ಳೆಯ ಕಥೆಗಳನ್ನು ಚದುರಂಗರು ಬರೆದರು. ಅವರ ಪ್ರಸಿದ್ಧವಾದ **ನಾಲ್ಕು ಮೊಳ ಭೂಮಿ**ಯಂತಹ ಕಥೆಯ ಸೂಕ್ಷ್ಮ ವ್ಯಂಗ್ಯ ಪ್ರಗತಿಶೀಲ ಉದ್ದೇಶದಾಚೆ ಸಾಗಿ ಕಥೆಗೆ ತೀಕ್ಷ್ಣತೆಯನ್ನು ನೀಡುತ್ತದೆ.

'ನವ್ಯತೆ'ಯಲ್ಲಿ ಕೇಳಬಂದದ್ದು ಅಪ್ಪಟ ಹೊಸದನಿ, ಹೊಸತುಡಿತ, ಬೆಚ್ಚುಬೀಳಿಸುವ ವಿದ್ಯುತ್ ಚಿಕಿತ್ಸೆ ಎಂಬುದಂತೂ ನಿರ್ವಿವಾದ. ಅಡಿಗರ ಕಾವ್ಯದಲ್ಲಿ ಕಂಡುಬಂದ ಈ ಅಂಶಗಳನ್ನೇ ಇನ್ನಷ್ಟು ಹೆಚ್ಚಿನ ಪ್ರಮಾಣದಲ್ಲಿ ಇನ್ನೂ ಕಲಾತ್ಮಕವಾಗಿ ನವ್ಯಕತೆಗಳಲ್ಲಿ ಕಾಣಬಹುದು.

ಸುತ್ತಲ ಪರಿಸರ ಹಾಗೂ ಅಂತರಂಗದ ಆಕಾಂಕ್ಷೆಗಳ ನಡುವಣ ಬಿರುಕು, ವ್ಯಕ್ತಿಯ ಅಂತರಂಗದ ದ್ವಂದ್ವಗಳು ತುಂಬಿದ ಜನಸಮುದಾಯದ ನಡುವೆಯೂ ತಾನು ಏಕಾಕಿ,ತಾನಿಲ್ಲಿ ಪರಕೀಯ ಎಂಬ ಅನಾಥಪ್ರಜ್ಞೆ, ಸಂಸ್ಕೃತಿಯ ಒತ್ತಡ ಹಾಗೂ ಅದಮ್ಯ ಕಾಮದ ನಡುವಣ ಒಳತೋಟಗಳು, ಬೆಸೆಯುವ ದೇಹಗಳೂ

ಅನುಭವಿಸುವ ಅಗಾಧ ಅತೃಪ್ತಿ, ಬೆಸೆಯಲಾಗದ ಮನಸ್ಸುಗಳು, ಪರಿಪೂರ್ಣತೆ ಬರಿಯ ಹಂಬಲವಾಗಿಯೇ ಉಳಿದುಬಿಡುವ ಉತ್ಕಟ ವಿಷಾದ – ನವ್ಯಕತೆಗಳಿಗೆ ತಾತ್ವಿಕ ನೆಲೆಗಟ್ಟನ್ನು ಒದಗಿಸಿದವು. ಮಾರ್ಕ್ಸ್‌ನ ಸಾಮಾಜಿಕ ಅರ್ಥವ್ಯವಸ್ಥೆಗಳೂ ಪರಿಹರಿಸಲಾಗದ ಈ ಒಳನೋವುಗಳ ಸೂಕ್ಷ್ಮತೆಗಳನ್ನು ಫ್ರಾಯ್ಡ್‌ನ ಮನೋಮಯ ವಿಶ್ವ ತೋರಿಸಿ ಕೊಟ್ಟು ಜಗತ್ತನ್ನು ಬೆರಗುಗೊಳಿಸಿತು, ಭಯಗೊಳಿಸಿತು, ತೀವ್ರ ವಿಷಾದದತ್ತಲೂ ಸೆಳೆಯಿತು. ಈ ಬೆಡಗು–ಭಯ–ವಿಷಾದ–ಜಿಗುಪ್ಸೆಗಳು ನವ್ಯದ ವಸ್ತುಗಳಾದವು. ಅದು ದಾಳಿಯಿಟ್ಟ ಜಗತ್ತೇ ಸಂಕೀರ್ಣವು, ರಹಸ್ಯಮಯವೂ ಆದುದರಿಂದ ನವ್ಯದ ಭಾಷೆಯು ಸಂಕೀರ್ಣವೂ ಸಂಕೇತಪ್ರಧಾನವೂ ಪ್ರತಿಮಾನಿಷ್ಠವೂ ಆಗುವುದು ಅನಿವಾರ್ಯವೆನಿಸಿತು.

ನವ್ಯಕತೆಗಳ ಸಮಗ್ರ ವಿಮರ್ಶೆಯಾಗಲೀ, ನವ್ಯಕತೆಗಾರರ ಪರಿಪೂರ್ಣ ಪಟ್ಟಿಯಾಗಲಿ ಈ ಸಂಪ್ರಬಂಧದ ವ್ಯಾಪ್ತಿ ಮೀರಿದುದು. ಇದೊಂದು ವಿನೀತ ಕಿರುನೋಟವಷ್ಟೆ. ಸ್ವಾತಂತ್ರ್ಯೋತ್ತರ ದಶಕದಿಂದ (1950) ಬಂಡಾಯ–ದಲಿತದ ಬಿರುಗಾಳಿ ಬೀಸುವವರೆಗಿನ (1970) ಎರಡು ದಶಕಗಳ ಅವಧಿಯೇ ಇಲ್ಲಿ ಪ್ರಧಾನ. ಆನಂತರದ ಎರಡು ದಶಕಗಳಲ್ಲಿ ನವ್ಯಕ್ಕೆ ಬಲವಾಗಿ ಅಂಟಿಕೊಂಡ ಶಾಂತಿನಾಥ ದೇಸಾಯಿ ಹಾಗೂ ಚಿತ್ತಾಲರಂಥವರನ್ನು ಇಲ್ಲಿ ಗಮನಿಸಲಾಗಿದೆ. ನವ್ಯದಿಂದ ಪ್ರೇರಿತರಾಗಿ ಹಟದಿಂದ ಎಂಬಂತೆ ಸಿಡಿದು ನಿಂತ ಲಂಕೇಶ್, ತೇಜಸ್ವಿ ಮುಂತಾದವರ ಮೊದಮೊದಲ ಕೃತಿಗಳನ್ನೂ ಇಲ್ಲಿ ಮರೆತಿಲ್ಲ ಎಂಬುದನ್ನು ಸ್ಪಷ್ಟಪಡಿಸಬೇಕು.

ನವ್ಯವನ್ನು ಅಪ್ಪಿಕೊಂಡು ಹಟದಿಂದ ಎಂಬಂತೆ ಅಂಟಿಕೊಂಡಿರುವ ಕತೆಗಾರರೆಂದರೆ ಬಿ.ಸಿ. ರಾಮಚಂದ್ರ ಶರ್ಮರು. ಪ್ರಮುಖವಾಗಿ ಕವಿಗಳ ಪಂಕ್ತಿಯಲ್ಲೇ ಅವರನ್ನು ಗಮನಿಸಿದರೂ ಶರ್ಮರ ಕಥನದ ಪ್ರತಿಭೆ ಉಜ್ವಲವಾದದ್ದೇ. ಅವರ ಕತೆಗಳು ಪದ್ಯಗಂಧಿಯಾದವು. **ಏಳನೇ ಜೀವ** ಸಂಕಲನದ **ಸಂಗಮ, ಸೆರಗಿನ ಕೆಂಡ, ಯಾರು ಹಿತವರು ನಿನಗೆ?** ಅತ್ಯುತ್ತಮ ಕತೆಗಳು.

ನವ್ಯರ ಪದ್ಯಗಂಧಿಯಾದ ಸಣ್ಣ ಕತೆಗಳಲ್ಲಿ ಮಹತ್ವಾಕಾಂಕ್ಷೆಯನ್ನ ಮೈಗೂಡಿಸಿಕೊಂಡು ಬೆಳೆದ ನವ್ಯರಲ್ಲಿ ಅನಂತಮೂರ್ತಿಯವರದ್ದು ದೊಡ್ಡ ಹೆಸರು. ಇವರ **ಘೋಜರಾಜ, ಪ್ರಕೃತಿ, ಪ್ರಶ್ನೆ, ಸೂರ್ಯನ ಕುದುರೆ** ಮುಖ್ಯವಾದ ಕತೆಗಳು

ನವ್ಯದ ಧೋರಣೆಗಳಿಗೆ ಇಂದಿಗೂ ಪ್ರಬಲವಾಗಿ ಅಂಟಿಕೊಂಡು ಬರೆದ ಕತೆಗಾರರೆಂದರೆ ಶಾಂತಿನಾಥ ದೇಸಾಯಿ ಅವರು. ತಮ್ಮ ಕೃತಿಗಳಲ್ಲಿ ಹದಿವಯಸ್ಸಿನ,

ತಾರುಣ್ಯದ, ಮಧ್ಯ ವಯಸ್ಸಿನ ಹಾಗೂ ಇಳಿವಯಸ್ಸಿನ ಮನೋಧರ್ಮಗಳ ಸುಸೂಕ್ಷ್ಮ ಚಿತ್ರಣವಿದೆ. ಅವರು ತಮ್ಮ ಕೃತಿಗಳ ಪ್ರಕಟಣೆಯಲ್ಲೂ ಮಂಜುಗಡ್ಡೆಯಿಂದ ಕೂರ್ಮಾವತಾರ- ದವರೆಗೆ – ಇದೇ ಕ್ರಮವನ್ನು ಅನುಸರಿಸುತ್ತಿರುವುದನ್ನು ನೋಡಿದರೆ ತಮ್ಮ ಕೃತಿಗಳೊಂದಿಗೇ ಬೆಳೆದಿದ್ದಾರೆ ಎನಿಸುತ್ತದೆ. ಅನುಭವಗಳನ್ನು ಅವರು ನಿರುದ್ವಿಗ್ನವಾಗಿ ಸ್ವೀಕರಿಸುತ್ತಾ ಹೋಗುವುದು, ಶೋಧಿಸುವುದು, ಒಂದು ಬಗೆಯ ಸಾಕ್ಷೀ ಪ್ರಜ್ಞೆಯಿಂದ ಅರ್ಥೈಸಲು ಯತ್ನಿಸುವುದು ಬೆರಗು ಮೂಡಿಸುತ್ತದೆ. ಅನಂತಮೂರ್ತಿಗಲ ಪದ್ಯ ಗಂಧವಾಗಲಿ, ತ.ರಾ.ಸು. ಸಂಪ್ರದಾಯದ ಉತ್ಕಟತೆಯಾಗಲಿ, ಲಂಕೇಶರ ಕೇವಲ ಗುಮಾನಿಯಾಗಲಿ, ಚಿತ್ತಾಲರ ಉಳಯಿಂದ ಕಡೆದು ನಿಲ್ಲಿಸುವ ಶಿಲ್ಪದ ಶಿಸ್ತಾಗಲೇ, ದೇಸಾಯಿಯವರಲ್ಲಿಲ್ಲ. ಅಸ್ತಿತ್ವವಾದಕ್ಕೆ ಸಹಜವಾದ ಅನುಭವದ ಯಥಾವತ್ ಸ್ವೀಕಾರ, ಹಾಗೆ ಹಾಗೆಯೇ ಬಿಡಿಸಿಡುವ, ಬಿಡಿಸಿಬಿಡುವ ಬಾಣಸಗಾರಿಕೆಯೇ ದೇಸಾಯಿಯವರ ಅನನ್ಯತೆಯಾಗಿದೆ. ಹೀಗಾಗಿ ಶಾಂತಿನಾಥ ದೇಸಾಯಿ ಅವರು ತಮ್ಮ ಕತೆಗಳಲ್ಲಿನ ಪಾತ್ರಗಳ ಅಂತರಂಗವನ್ನು ಯಶಸ್ವಿಯಾಗಿ ಬಿಚ್ಚಬಲ್ಲರು. ಮತ್ತು ತುಮುಲಗಳನ್ನು ತೇಲಿಸಿಬಿಡುವರು. ಆದರೆ ಸಂಸ್ಕೃತಿಯು ತಂದೊಡ್ಡುವ ಸಂಕೋಚದ ಪೊರೆಗಳನ್ನು ಕಳಚಿಕೊಳ್ಳುವ ಅವಶ್ಯಕತೆಯೇ ಅವರ ಕಾಳಜಿ. ಅದೇ ಹೊಸ ಬದುಕಿಗೆ ಹೊಂದಿಕೊಳ್ಳಲು ಪೂರ್ವ ಸಿದ್ಧತೆ ಎಂದು ಶಾಂತಿನಾಥರು ಭಾವಿಸುವಂತಿದೆ. ಕನ್ನಡದ ಶ್ರೇಷ್ಠಕತೆಗಳಲ್ಲಿ ಒಂದಾದ ಅವರ **ಕ್ಷಿತಿಜ**ದ ಮಂದಾಕಿನಿ, ಹಡಗದಲ್ಲಿ ಡೆಕ್‌ನಿಂದ ಡೆಕ್‌ಗೆ ಓಡಾಡುತ್ತಾ ಬದುಕನ್ನು ಸ್ವೀಕರಿಸುವ ಬಗೆ ವಿಸ್ಮಯಕಾರಿಯಾಗಿದೆ. ಡಾ॥ ಮುಖರ್ಜಿ, ಸರದಾರಜೀ ಸಂಜೀವ ಸಪ್ರೂ, ಆಗ್ವಿ ಮುಂತಾದವರೆಲ್ಲಾ ಅವಳ ಸಂಕೋಚಗಳನ್ನು ಸಡಿಲಿಸುವಲ್ಲಿ ತಮ್ಮದೇ ರೀತಿಯಲ್ಲಿ ನೆರವಾದರೂ, ನಿಜದಲ್ಲಿ ಅವಳಗಿಂತ ತುಂಬ ಹಿರಿಯ- ಯೂರೋಪಿಯನ್ ಮುದುಕ ಹ್ಯಾರಿ ಮೆಕಾರ್ಥಿ ಅವಳಲ್ಲಿ ತಂದುಕೊಡುವ ಪೆಟರ್ನಲ್ ಸುರಕ್ಷಿತತೆ, ಆ ಮೂಲಕವೇ ಅವಳನ್ನು ಸಡಿಲುಗೊಳಿಸುತ್ತಾ ಹೊಸ ಬದುಕಿನತ್ತ ಸಿದ್ಧಗೊಳಿಸುವಂತಿದೆ. ಉಳಿದವರೊಡನೆ ಸೆಡೆತುಕೊಳ್ಳುವ ಮಂದಾ, ಹ್ಯಾರಿಯೊಡನೆ ತೋರುವ ಮುಕ್ತತೆಯಿಂದಲೇ, ಅವನಿಂದಲೇ ಬಹುಶ: ಹೊಸ ನೋಟಗಳನ್ನು ಪಡೆಯುತ್ತಾಳೆ.

ಕತೆಯ ಆಶಯ-ಶಿಲ್ಪಗಳು ಹೀಗೆ ಏಕೀಭವಿಸಿದ, ಎಲ್ಲಿಯೂ ಭಾವೋದ್ವಿಗ್ನತೆ, ಭಾವತಿರೇಕಗಳಿಲ್ಲದ, ಸಂಯಮ ಶಾಂತಿನಾಥರ ಅನನ್ಯತೆಯೇ ಸರಿ. ಹ್ಯಾರಿ ಮೆಕಾರ್ಥಿಯ ಸೈಕೋ ಎನಲಿಟಿಕಲ್ ಟ್ರೀಟ್‌ಮೆಂಟಿನಿಂದ ಸಡಿಲಗೊಳ್ಳುವ ಮುಜುಗರಗಳು ನವ್ಯದ ಹೊಸ ಕ್ಷಿತಿಜವನ್ನೇ ತೆರೆದವು.

ಶಾಂತಿನಾಥರ ಇತ್ತೀಚಿನ ಸಂಕಲನವಾದ **ಕೂರ್ಮಾವತಾರ**ದ ಕತೆಗಳಲ್ಲೂ ಇದೇ ಬಗೆಯ ಸಂಯಮದ ಧೋರಣೆ ಕಾಣುತ್ತದೆ. ಈ ಸಂಕಲನದ ಅತ್ಯುತ್ತಮ ಕಥೆಯಾದ ಭರಮಾ ಹೋಗಿ ನಿಖಿಲನಾದದ್ದು ಅತಿ ಸುಲಭವಾಗಿ ಬಂಡಾಯದ ಆವೇಶಕ್ಕೆ ತಿರುಗಿಬಿಡಬಹುದಿತ್ತು. ಯಜಮಾನ ವರ್ಗದ ವಿಲಾಸದ ಆನುಕರಣೆಯ ಖುಷಿ, ಜೊತೆ ಜೊತೆಗೇ ಅದರ ನೆರಳಾದ ನೋವನ್ನೂ ಚಿತ್ರಿಸುತ್ತದೆ. ನಿಖಿಲದ ಪ್ರೇಯಸಿಯನ್ನು ವಿವಂಚನೆಗೊಳಗಾಗಿಸುವ ಕಡೆಯ ಕ್ಷಣದಲ್ಲಿ ಮೇಲುಗೈಯಾಗುವ ಮಾನವೀಯತೆ ಅತ್ಯಪೂರ್ವ ಸಂಯಮದ ಇತ್ಯಾತ್ಮಕ ಗುಣವಾಗಿದೆ.

ಲಂಕೇಶರ **ನಾನಲ್ಲ, ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆ** ಹಾಗೂ **ಕೆರೆಯ ನೀರನು ಕೆರೆಗೆ ಚೆಲ್ಲಿ** ಎಂಬ ಮೂರು ಸಂಕಲನದ ಕತೆಗಳು ಬಹುಪಾಲು ಕಟುವ್ಯಂಗ್ಯದತ್ತಲೇ ತುಡಿಯುತ್ತವೆ. ಅವರ **ನಿವೃತ್ತರು** ಕತೆಯ ಮುದುಕರ ಮೃಗೀಯ ವಾಸನೆಗಳು ಲೇಖಕರ ಸಾಕ್ಷಿಯಲ್ಲಿ ಪದರ ಪದರವಾಗಿ ಅನಾವರಣಗೊಳ್ಳುತ್ತಾ ಹೇಸಿಗೆ, ಕೊಳಕುಗಳನ್ನು ಸುತ್ತಲೂ ಚೆಲ್ಲುತ್ತಾ ಬದುಕಿನ ಭೀಭತ್ಸಕ್ಕೆ ಕನ್ನಡಿ ಹಿಡಿಯುತ್ತವೆ.

ಕನ್ನಡದ ಅತ್ಯುತ್ತಮ ಕತೆಗಾರರಲ್ಲಿ ಪೂರ್ಣಚಂದ್ರ ತೇಜಸ್ವಿ ನಿಸ್ಸಂದೇಹವಾಗಿ ಒಬ್ಬರು. **ಅಬಚೂರಿನ ಪೋಸ್ಟ್ ಆಫೀಸು, ಸ್ವರೂಪ, ಕಿರಿಗೂರಿನ** ಗಯ್ಯಾ**ಳಿಗಳು, ಹುಲಿಯೂರಿನ ಸರಹದ್ದು**ವಿನ ಮೂಲಕ ಗಮನ ಸೆಳೆದರು. ಹಾಗೆಯೇ ಎ.ಕೆ. ರಾಮಾನುಜನ್ **ಅಣ್ಣಯ್ಯನ ಮನಶ್ಶಾಸ್ತ್ರ**, ಕೆ. ಸದಾಶಿವರ **ನಲ್ಲಿಯಲ್ಲಿ ನೀರು ಬಂದಿತು,** ರಾಜಲಕ್ಷ್ಮಿ ಎನ್.ರಾವ್ ಅವರ **ಆವೇ ಮರಿಯಾ,** ಟಿ.ಜಿ. ರಾಘವರ **ಶ್ರಾದ್ಧ**, ಖಾಸನೀಸರ **ತಬ್ಬಲಿಗಳು, ಖಾಸನೀಸರ ಕತೆಗಳನ್ನು** ಇಲ್ಲಿ ಉದಾಹರಿಸಬಹುದು. ಶ್ರೀಮತಿ ವೈದೇಹಿ **ಸಂಗಮ,** ವೀಣಾ ಶಾಂತೇಶ್ವರರ **ಮುಳ್ಳುಗಳು, ಕವಲು, ಕೊನೆಯದಾರಿ**. ನವ್ಯ ಸಂದರ್ಭದಲ್ಲಿ ರಚನೆಯಾಗ ಅತ್ಯುತ್ತಮ ಸಣ್ಣಕತೆಗಳು.

ನವ್ಯತೆ, ಕನ್ನಡ ಕಥಸಂದರ್ಭದಲ್ಲಿ ಒಂದು ಹೊಳಪಿನ ಮಿಂಚು, ಕಣ್ಣು ಕೋರೈಸುವ ಅದರ ಅವಧಿ ತುಂಬ ಕಿರಿದು ಎಂಬುದು ನಿಜ. ಆದರೆ ಕೇವಲ ಎರಡು ದಶಕಗಳಲ್ಲಿ ಅದರ ಪ್ರಭಾವ ತುಂಬ ಸಾಂದ್ರವಾದದ್ದು ಎಂಬುದೂ ನಿಜ. ನವ್ಯೋತ್ತರ ದಶಕದಲ್ಲೂ ಶಾಂತಿನಾಥ ದೇಸಾಯಿ, ವೀಣಾ ಶಾಂತೇಶ್ವರ ನವ್ಯತೆಯನ್ನು ಮುಂದುವರೆಸಿದ್ದರು. ಅನಂತಮೂರ್ತಿ, ಚಿತ್ತಾಲರು ಕೆಲವು ಹೊಸ ಆಯಾಮಗಳನ್ನು ನವ್ಯಕ್ಕೆ ತಂದಿತ್ತಿದ್ದಾರೆ. ನವ್ಯರ ದನಿ ಪೂರ್ಣವಾಗಿ ಉಡುಗಿಲ್ಲ. ಆದರೆ ಅದರ ದನಿ ನವ್ಯೋತ್ತರ ದಶಕಗಳಲ್ಲಿ ಕ್ಷೀಣವಾಗಿರುವುದನ್ನು ಗಮನಿಸಹುದು.

ದಲಿತ ಬಂಡಾಯ ಪರಿಕಲ್ಪನೆಯ ಅರ್ಥವೇನು, ಈ ಚಳುವಳಿಯ ಪ್ರೇರಣೆಗಳು ಯಾವುವು? ಎಂಬ ಚರ್ಚೆಯ ಹಂತ ಮುಗಿದುಹೋಗಿ, ಅದರ ಸೃಜನಶೀಲ ನಿದರ್ಶನಗಳಾಗಿ ಕತೆ ಕಾವ್ಯವೂ, ಸಕ್ರಿಯ ಹೋರಾಟವೂ ಈ ಹತ್ತು ಹದಿನೈದು ವರುಷಗಳಲ್ಲಿ ಸಾಗಿ ಬಂದು ನಮ್ಮೆದುರು ನಿಂತಿವೆ. ಬಂಡಾಯ ಚಳುವಳಿಯು ಕಾವ್ಯ ಪ್ರಧಾನವಾಗಿರುವಂತೆ ಕಂಡರೂ ಎಂಬತ್ತರ ದಶಕದಲ್ಲಿ ಬಂದ ಕತೆ-ಕಾದಂಬರಿಗಳು ಕನ್ನಡಕ್ಕೆ ಹೊಸ ಸತ್ವವನ್ನು ಸೇರ್ಪಡೆಗೊಳಿಸಿದಾಗ, ಹೊಸ ದಿಕ್ಕುಗಳಿಗೆ ಹೊಯ್ದಾಡುವ ಸೂಚನೆಯನ್ನು ಕೊಟ್ಟಿತು. ಶಿಕ್ಷಿತರಾಗಿ ಬಂದ ಗ್ರಾಮೀಣ ಕೆಳಜಾತಿಗಳ ತರುಣರು ದೊಡ್ಡ ಸಂಖ್ಯೆಯಲ್ಲಿ ಕತೆ ಬರೆಯುತ್ತಿರುವುದು ಮತ್ತು ಮಧ್ಯಮ ವರ್ಗದ ಶಿಷ್ಟ ಜಾತಿಗಳ ಲೇಖಕರು ಆಡುಂಬೊಲ ಮಾಡಿಕೊಂಡಿದ್ದ ಈ ಕ್ಷೇತ್ರ ಈಗ ಹೊಸ ಸಾಂಸ್ಕೃತಿಕ ಚಲನೆಯ ಆಶಯಗಳನ್ನು ಪ್ರಕಟಿಸುತ್ತಿರುವುದು ಸ್ಪಷ್ಟವಾಗಿದೆ.

ತೇಜಸ್ವಿಯವರ ಐತಿಹಾಸಿಕ ಮಹತ್ವದ **ಅಬಚೂರಿನ ಪೋಸ್ಟಾಫೀಸು** ಮುನ್ನುಡಿಯು (ಹೊಸ ದಿಂಗತದೆಡೆಗೆ) ಸಾಂಸ್ಕೃತಿಕ ಕಾಳಜಿಗಳು ಸಮುದಾಯದ ಪರವಾಗಿ ಮುಖ ತಿರುಗಿಸಬೇಕೆಂದು ತಂತ್ರ-ಸಂಕೇತಗಳಲ್ಲಿ ಮುಳುಗಿ ಯಾಂತ್ರಿಕವಾಗಿರುವ, ನವ್ಯದ ಬಡ ಅಭಿವ್ಯಕ್ತಿ, ವಿಧಾನಗಳನ್ನೂ, ಹುಸಿ ಕ್ರಾಂತಿಕಾರಕತನವನ್ನೂ ಮಧ್ಯಮವರ್ಗದ ಹಿತಾಸಕ್ತಿಗಳನ್ನೂ ತೊರೆಯ ಬೇಕೆಂದೂ ಕಡ್ಡಿ ಮುರಿದಂತೆ ಹೇಳಿತು. **ಅವನತಿ, ತಬರನ ಕಥೆಗಳು** ಇದಕ್ಕೆ ಸಾಕ್ಷಿಯಾಗಿದ್ದವು. ಬೆಸಗರಹಳ್ಳಿಯವರು ಈ ಹೊಸತಿನ ಆಸುಪಾಸಿನಲ್ಲೇ **ಜೀತ, ಗರ್ಜನೆ, ಹರಕೆಯ ಹಣ, ಕಕರನ ಯುಗಾದಿ**ಯಂಥ ಮಹತ್ವದ ಕತೆಗಳನ್ನು ಬರೆದಿದ್ದರು. ಹೀಗೆ ಬಂಡಾಯ ಸಂಘಟನೆ ಶುರುವಾದ ಮೇಲೆಯೇ ಗೆರೆ ಕೊರೆದಂತೆ ಬಂಡಾಯ ಸಾಹಿತ್ಯ ಶುರುವಾಗಲಿಲ್ಲ. ಹಳ್ಳಿಯ ಹೊಲ ದುಡಿಮೆಯ ಅನುಭವಗಳೊಡನೆ ಬಂದ ಶೂದ್ರ/ದಲಿತ ಲೇಖಕರಿಗೆ ನವ್ಯದ ವಾತಾವರಣದಲ್ಲಿ ಕಟ್ಟಿದ ಉಸಿರು ನಿರಾಳವಾಗಿ ಬಿಡಬಹುದು ಅನಿಸುವ ಹೊತ್ತಲ್ಲಿ, ಅಂದರೆ (ಲೋಹಿಯಾ) ಸಮಾಜವಾದಿ ತಾತ್ವಿಕತೆಯೊಂದಿಗೆ ನಿಖರವಾಗಿ ಗುರುತಿಸಿಕೊಂಡು ತಮ್ಮ ಅನುಭವಕ್ಕೆ ತಕ್ಕ ಅಭಿವ್ಯಕ್ತಿಯನ್ನು ಹುಡುಕುತ್ತಿರುವಂತೆಯೇ, ಅವರ ಅತ್ಯುತ್ತಮ ಕೃತಿಗಳು ಪ್ರಕಟವಾದವು. **ಒಂದು ದಹನದ ಕತೆ, ಅಮಾಸ** (ದೇವನೂರು), **ಅವನು ನಪುಂಸಕ, ಕ್ಷಾಮ** (ಬರಗೂರು), **ಬಿಚ್ಚಿದ ಬಟ್ಟೆ, ಮೀನುಗಳು** (ನಾಗವಾರ), **ಸ್ವರೂಪ, ತಬರನ ಕತೆ** (ತೇಜಸ್ವಿ) ಇವುಗಳ ಸಾಹಿತ್ಯಿಕ-ತಾತ್ವಿಕ ಸ್ವರೂಪದ ವ್ಯತ್ಯಾಸವನ್ನು ಗಮನಿಸಬಹುದು.

ಬಂಡಾಯ ಕಥೆಗಳು ವಸ್ತು ಮತ್ತು ಧೋರಣೆಯನ್ನು ಹೆಚ್ಚಾಗಿ ಮುಂದಿಟ್ಟುಕೊಂಡು ಬೆಳೆಯುತ್ತವೆ. ಇದು ಅವುಗಳ ಮಿತಿಯೂ ಆಗಿದೆ. ಬೆಸಗರಹಳ್ಳಿ, ಕುಂವಿ, ಕಟ್ಟಾಡಿಯವರಲ್ಲಿ ಗಟ್ಟಿಮುಟ್ಟಾದ ವಸ್ತುವನ್ನು ಕಾಣುತ್ತೇವೆ; ಬರಗೂರು, ವಾಲೀಕಾರರಲ್ಲಿ ಧೋರಣೆಯೇ ಪ್ರಧಾನವಾಗಿರುತ್ತದೆ. ಒಂದೇ ವಸ್ತುವನ್ನು ಬಂಡಾಯ ನಿಲುವು ಮತ್ತು ನವ್ಯದ ನಿಲುವು ಹೇಗೆ ಭಿನ್ನವಾಗಿ ನಿರ್ವಹಿಸುತ್ತವೆ ಎಂದು ಯೋಚಿಸುವಾಗ ಲಂಕೇಶರ **ಮುಟ್ಟಿಸಿಕೊಂಡವನು** ನೆನಪಿಗೆ ಬರುತ್ತಿದೆ. (ಡಾ॥ ತಿಪ್ಪೇಸ್ವಾಮಿಯವರ **ಅನುಭವದ ಆಧಾರದ ಕಥೆ**) ಅಸ್ಪೃಶ್ಯತೆಯು ನಿರ್ಮಿಸಿದ ಭೀಕರ ಮನಸ್ಥಿತಿಯನ್ನು ಈ ವಸ್ತು ಒಳಗೊಂಡಿದೆ.

ಅದೇ ರೀತಿ ಪ್ರಸಿದ್ಧ ಸಣ್ಣಕತೆಗಳಾದ **ಅಮಾಸ, ಮೂಡಲ ಸೀಮೇಲಿ, ದೇವರಹೆಣ, ರುಖಿಯಾ, ಹತ್ಯೆ, ಕಪ್ಪು ಹುಡುಗನ ಹಾಡು, ಬಡೇಸಾಬು ಪುರಾಣ, ಗಾಂಧಿ, ಕಕರನ ಯುಗಾದಿ, ಮಾಯಿ** – ಹೀಗೆ ಎಷ್ಟೋ ವಿಶಿಷ್ಟವಾದ ಅತ್ಯುತ್ತಮ ಕಥೆಗಳು ಈ ಪಂಥದಲ್ಲಿ ಸಾಲಾಗಿ ಕಾಣುತ್ತವೆ.

ಎಂಬತ್ತರ ದಶಕದಲ್ಲಿ ಬರೆದ ನಾಡಿಗ, ರಾಮಚಂದ್ರ, ದೇವ, ಪ್ರಸನ್ನ, ಕೆ. ಸತ್ಯನಾರಾಯಣ, ವೈದೇಹಿ, ದಿವಾಕರ ಮೊದಲಾದವರ ಫ್ಯಾಂಟಸಿ ತಂತ್ರದ ಕಥೆಗಳನ್ನು ಉಲ್ಲೇಖಿಸುತ್ತಾ ಇದು ಬಂಡಾಯದ ನಂತರ ಹುಟ್ಟುತ್ತಿರುವ ಹೊಸ ಚಳುವಳಿ ಎಂದು ಗುರುತಿಸಲಾಗಿದೆ (ರಾಮಚಂದ್ರ ದೇವ). ಆದರೆ ಇದು ಪರಂಪರೆಯೊಂದನ್ನು ಹುಟ್ಟು ಹಾಕಬಲ್ಲ ಶಕ್ತಿ–ಲಕ್ಷಣ ತೋರಿಸಿಲ್ಲ. 'ನವ್ಯದ ಅಂತರ್ಮುಖೀ ಮತ್ತು ದಲಿತ ಬಂಡಾಯದ ಸಾಮಾಜಿಕ ಪ್ರಜ್ಞೆಯ ಬಹಿರ್ಮುಖೀ ಕಥಾಮಾರ್ಗಗಳೆರಸರ ಒಳ್ಳೇ ಅಂಶಗಳನ್ನೊಳಗೊಂಡು ಹೊಸದೊಂದು ಮಾರ್ಗ ಹುಟ್ಟಬೇಕೆಂದೂ ಆಶಿಸಲಾಗಿದೆ (ವೀಣಾ ಶಾಂತೇಶ್ವರ). ಆದರೆ ಅದಕ್ಕೂ ಪುರಾವೆಯಾಗಿ ಕೃತಿಗಳು ಬರಬೇಕಾಗಿವೆ; ಮೇಲಾಗಿ ಬಂಡಾಯ ಲೇಖಕರು ಈಗ ಬರವಣಿಗೆ ಆರಂಭಿಸಿರುವುದರಿಂದ ಅದರ ಸಾಧ್ಯತೆಗಳು ಮುಗಿದವೆಯೆಂಬಂತೆ ಮಾತನಾಡುವುದು ಅಷ್ಟು ಸರಿಯಲ್ಲ.

ಗದ್ಯವು ಜನಮನ್ನಣೆ ಗಳಿಸಲು ಪ್ರಬಲ ಕಾರಣವೆಂದರೆ, ಅದರ ಸ್ಪಷ್ಟತೆ, ಸರಳತೆ, ಅರ್ಥ ವಿಸ್ತಾರ, ಸೂಕ್ಷ್ಮತೆ ಎಲ್ಲವನ್ನು ಅದು ಸರಾಗವಾಗಿ ಅರ್ಥೈಸುವುದೇ ಆಗಿದೆ. ಆದ್ದರಿಂದ ಪದ್ಯದ ಜಟಿಲತೆ, ಸಂಕೀರ್ಣತೆಗಿಂತ ಗದ್ಯ ಹೃದ್ಯವಾಗಿ ಜನಮೆಚ್ಚುಗೆ ಗಳಿಸಿತು. ಕನ್ನಡ ಆಧುನಿಕ ಸಾಹಿತ್ಯದ ಪ್ರಾರಂಭದ ಕಾಲಘಟ್ಟದಲ್ಲಿ ಅಂದರೆ ಮುದ್ದಣ್ಣನ ಆಸುಪಾಸಿನ ಕಾಲದಲ್ಲಿ ಬಂಗಾಳಿಯಿಂದ ಮತ್ತು ಮರಾಠಿಯಿಂದ ಕನ್ನಡಕ್ಕೆ ಹಲವಾರು ಕಾದಂಬರಿಗಳು ಅನುವಾದದ ಮೂಲಕ ಬಂದುವು. ಅವುಗಳಿಗೆ ಪ್ರಮುಖವಾಗಿ **ಗಳಗನಾಥರು ಮರಾಠಿ** ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದರು. ಇವುಗಳ ಜೊತೆಗೆ ಕೆಲವು ಸ್ವತಂತ್ರ ಕಾದಂಬರಿಗಳು ಕಾಣಿಸಿಕೊಂಡವು. ಬಂಗಾಳಿಯಿಂದ ಬಂಕಿಮಚಂದ್ರ ಚಟರ್ಜಿಯವರ ದುರ್ಗೇಶ ನಂದಿನಿ (ಕ್ರಿ.ಶ.1885) ಕಾದಂಬರಿಯನ್ನು **ಬಿ. ವೆಂಕಟಾಚಾರ್ಯರು** ಕನ್ನಡಕ್ಕೆ ಅನುವಾದಿಸಿದರು. **ಗುಲ್ವಾಡಿ ವೆಂಕಟರಾಯರು ಇಂದಿರಾ** (1899) ಕೃತಿಯು ಕನ್ನಡದಲ್ಲಿ ಮೊದಲನೆಯ ಸ್ವತಂತ್ರ ಕಾದಂಬರಿಯಾಗುವಂತೆ ಮಾಡಿದರು. **ಗಳಗನಾಥ**ರ ಮೊದಲ ಕಾದಂಬರಿ **ವಾಗ್ಭೂಷಣ** (1896) ಆಗಲೇ ಪ್ರಕಟವಾಗಿತ್ತು, ಅದೇ ರೀತಿ ಬಾಬುರಾಯರು **ವಾಗ್ದೇವಿ** (1905) ಎಂಬ ಕಾದಂಬರಿಯನ್ನು ರಚಿಸಿದರು. ಆಧುನಿಕ ಕನ್ನಡದಲ್ಲೆ ಒಂದು ಹೆಸರಾಂತ ಕಾದಂಬರಿ ಎಂ.ಎಸ್. ಪುಟ್ಟಣ್ಣನವರ **ಮಾಡಿದ್ದುಣ್ಣೋ ಮಹರಾಯ**, ಕಾದಂಬರಿ ಲೋಕದ ಮೊದಲ ಚಿರಸ್ಮರಣೀಯ ಕಾದಂಬರಿ ಎಂದು ಹೆಸರು ಪಡೆಯಿತು. ಈ ಕಾದಂಬರಿಗಳಲ್ಲಿ ಪ್ರಮುಖವಾಗಿ ಸಮಾಜದ ಓರೆ ಕೋರೆಗಳು, ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸಿ ಸಾಮಾಜಿಕರಲ್ಲಿ ಜಾಗೃತಿ ಮೂಡಿಸಿದವರು. ಇಂತಹ ನವನವೀನ ಬರವಣಿಗೆ ಕಾದಂಬರಿ ಲೋಕದಲ್ಲಿ ಹೊಸ ಮೈಲಿಗಲ್ಲನ್ನು ನಿರ್ಮಿಸಿದ್ದೇ ಅಲ್ಲದೆ ಕಾದಂಬರಿಗೆ ಭದ್ರ ಬುನಾದಿಯನ್ನು ಹಾಕಿದವು.

ಕರ್ನಾಟಕವು ಇಪ್ಪತ್ತನೆ ಶತಮಾನದ ಆದಿಭಾಗದಲ್ಲಿ ಎರಡು ಪ್ರಮುಖ ಅನುಭವಗಳಿಗೆ ತನ್ನನ್ನು ತಾನು ತೆರೆದುಕೊಂಡಿತು. ಮೊದಲನೆಯದಾಗಿ ದೇಶದಾದ್ಯಂತ ವ್ಯಾಪಿಸಿದ್ದ ಸ್ವತಂತ್ರ್ಯ ಸಂಗ್ರಾಮ ಮತ್ತು ಎರಡನೆಯದಾಗಿ ಪಾಶ್ಚಾತ್ಯರ ಆಗಮನದಿಂದ ಮತ್ತು ಇಂಗ್ಲಿಷ್ ಶಿಕ್ಷಣದಿಂದ ಕೆಳ ಮತ್ತು ಮಧ್ಯಮ ವರ್ಗಗಳಲ್ಲಾದ ಸಾಮಾಜಿಕ ಬದಲಾವಣೆಗಳು. ಈ ಎರಡೂ ಹೊಸ ಅನುಭವಗಳು ಕಾದಂಬರಿಗೆ ಮೂಲ ಆಕರವಾಗಿ ದೊರೆತಿದ್ದು ಮತ್ತು ಸಾಮಾಜಿಕ ಬದಲಾವಣೆಗೆ ಮುಂದಾಗಿದ್ದು ಕಾದಂಬರಿಯ ಹೆಚ್ಚುಗಾರಿಕೆ ಎಂದೇ ಹೇಳಬೇಕಾಗಿದೆ. ಆದರೆ ಕಾದಂಬರಿಗಳು ಇಷ್ಟಕ್ಕೆ ಸೀಮಿತವಾಗದೆ ಜನಮಾನಸದೊಳಗಿನ ಸಾಂಸ್ಕೃತಿಕ ಪಲ್ಲಟಗಳಿಗೆ ತನ್ನದೇ ಕಾಣಿಕೆ ಕೊಡಲು ಮುಂದಾದುವು. ಇದರ ಬಗ್ಗೆ ಜಿ.ಎಸ್.ಅಮೂರರು ಹೇಳುವಂತೆ 'ಕನ್ನಡ ಕಾದಂಬರಿಯಲ್ಲಿ ಸಾಮಾಜಿಕ

ಪರಿವರ್ತನೆಯಲ್ಲದೆ ಅದಕ್ಕೂ ಆಳವಾದ ಸಾಂಸ್ಕೃತಿಕ ಸಂವಾದಗಳಿವೆ ಎನ್ನುವುದರಲ್ಲಿ ಮಾತ್ರ ಸಂಶಯವಿಲ್ಲ"[1] ಎಂಬ ಮಾತುಗಳು ನಿಸ್ಸಂಶಯವಾಗಿ ಒಪ್ಪತಕ್ಕಂತಹವು.

ಆಧುನಿಕ ಕನ್ನಡ ಕಾದಂಬರಿಗಳ ಲೋಕ ತೆರೆದುಕೊಳ್ಳಲು ಬಹುಮುಖ್ಯ ಕಾರಣ ಇಂಗ್ಲಿಷರ ಪ್ರಭಾವ ಎಂದು ಈಗಾಗಲೇ ತಿಳಿಸಲಾಗಿದೆ. ಆದರೆ ಇಂಗ್ಲಿಷ್ ಮೂಲಕ ಕೇವಲ ಸಾಮಾಜಿಕತನವನ್ನಷ್ಟೇ ತನ್ನಲ್ಲಿ ತೊಡಗಿಸಿಕೊಳ್ಳದೆ ಆಗಿನ ಕಾಲದ ಮಹಾನ್ ಸಾಧಕರಾದ **ಡಾರ್ವಿನ್, ಮಾರ್ಕ್ಸ್, ಫ್ರಾಯ್ಡ್** ಮುಂತಾದ ಪಾಶ್ಚಿಮಾತ್ಯ ವಿದ್ವಾಂಸರ ಪ್ರಭಾವ ದಟ್ಟವಾಗಿ ಇಂಗ್ಲಿಷ್ ಸಾಹಿತ್ಯದ ಮೇಲೆ ಆಗಿದೆ. ಆದರೆ ಅದು ಕನ್ನಡಕ್ಕೆ ಬಂದದ್ದು ಮಾತ್ರ **ನವೋದಯ ಚಳುವಳಿ**ಯ ನಂತರವಷ್ಟೆ. "ಕಾದಂಬರಿಯೆಂಬುದು ಬದುಕಿನ ಜಾಜ್ವಲ್ಯಮಾನ ಪುಸ್ತಕ" ಎನ್ನುತ್ತಾರೆ **ಲಾರೆನ್ಸ್**. ಬದುಕಿನ ಬದಲಾದ ಸಂವೇದನೆಗೆ ತಕ್ಕಂತೆ ಕಾದಂಬರಿ ಪ್ರಕಾರದಲ್ಲೂ ಕಾಲಕಾಲಕ್ಕೆ ಹೊಸ ಆವಿಷ್ಕಾರಗಳು ನಡೆದಿವೆ. ಸಾಮಾಜಿಕ ಘಟನೆಗಳು ಕಾದಂಬರಿಕಾರರ ಮನೋಭೂಮಿಕೆಯ ಮೇಲೆ ಮಾಡಿದ ಪರಿಣಾಮ ಅದು ಕಾದಂಬರಿಗಳಲ್ಲಿ ವೇದ್ಯಗೊಂಡಿದೆ. ಹಾಗೆಯೇ ಅದರ ಅಭಿವ್ಯಕ್ತಿ ಮಾಧ್ಯಮವು ಬದಲಾಗಿದೆ. ರಮ್ಯ ಸಂಪ್ರದಾಯದಿಂದ ವಾಸ್ತವಕ್ಕೆ ಹೊರಳಿದ ಕಾದಂಬರಿ ಪ್ರಕಾರವನ್ನು ಆಧುನಿಕತೆಯತ್ತ ತಂದವರು **ಜೇಮ್ಸ್ ಕಾನ್ರಾಡ್, ಜೇಮ್ಸ್ ಜಾಯ್ಸ್, ವರ್ಜೀನಿಯಾ ವೂಲ್ಫ್** ಮುಂತಾದವರು"[2]

ಕನ್ನಡ ಸಾಹಿತ್ಯದಲ್ಲಿ ಮೊದಲ ಕಾದಂಬರಿಗಳು ಸ್ತ್ರೀ ಸ್ವಾತಂತ್ರ್ಯ ಒಲವುಗಳುಳ್ಳ ರಚನೆಗಳು ಆಗಿದ್ದವು. ಇದು ಕನ್ನಡದ ಮೊದಲ ಕಾದಂಬರಿಗಳ ಶೀರ್ಷಿಕೆಯನ್ನು ಗಮನಿಸಿದರೆ ತಿಳಿಯುತ್ತದೆ. ಉದಾ: **ಇಂದಿರಾಬಾಯಿ, ಇಂದಿರೆ, ವಾಗ್ದೇವಿ, ಭಾಗೀರಥಿ** ಮುಂತಾದವು ಇದೇ ರೀತಿ ಭಾರತದ ಇತರೆ ಭಾಷೆಗಳ ಮೊದಲ ಕಾದಂಬರಿಗಳು ಸ್ತ್ರೀ ಪ್ರಧಾನತೆಯಿಂದಲೇ ಕೂಡಿದವುಗಳೆಂದು ತಿಳಿಸ ಬೇಕಾಗುತ್ತದೆ. ಇವುಗಳನ್ನು ಗಮನಿಸಿದರೆ ಸಾಮಾಜಿಕ ಪರಿಸ್ಥಿತಿಯ ಸ್ಪಷ್ಟ ಚಿತ್ರ ನಮ್ಮ ಕಣ್ಣೆದುರು ನಿಲ್ಲುತ್ತದೆ

ಕನ್ನಡ ಕಾದಂಬರಿಯ ಉಗಮಕ್ಕೆ ಸಂಬಂಧಿಸಿದಂತೆ **ಡಾ|| ಡಿ.ಆರ್. ನಾಗರಾಜ್** ಅವರು ಎರಡು ಅಂಶಗಳನ್ನು ಹೇಳುತ್ತಾರೆ.

1) ಪರಕೀಯ ಯಜಮಾನ ಸಂಸ್ಕೃತಿ ಮತ್ತು ದೇಸಿ ಸಂಸ್ಕೃತಿಗಳ ನಡುವಿನ ಮುಖಾಮುಖಿಯಲ್ಲಿ ಕಾದಂಬರಿ ಹುಟ್ಟುತ್ತದೆ.

2) ದೇಸಿ ಮಧ್ಯಮ ವರ್ಗ ರೂಪುಗೊಂಡು, ತನಗೊಂದು ಆಧುನಿಕ ಸಾಂಸ್ಕೃತಿಕ ವ್ಯಕ್ತಿತ್ವ ನಿರ್ಮಾಣ ಮಾಡಿಕೊಳ್ಳುವಾಗ ಉಂಟಾಗುವ ದ್ವಂದ್ವದಲ್ಲಿ ಕಾದಂಬರಿ ಹುಟ್ಟುತ್ತದೆ ಎನ್ನುತ್ತಾರೆ.

1875 ರಿಂದ 1930ರ ವರೆಗಿನ ಕಾಲವನ್ನು ಕನ್ನಡ ಕಾದಂಬರಿಯ ಉದಯ ಕಾಲವೆಂದು ಗುರುತಿಸಲಾಗಿದೆ. ಇದರ ಹಿಂದಿನ ಮುಖ್ಯ ಪ್ರೇರಣೆ ಇಂಗ್ಲಿಷ್ ಶಿಕ್ಷಣ, ಸಾಹಿತ್ಯ ಹಾಗೂ ದೇಸಿ ಭಾಷೆಗಳಾದ **ಬಂಗಾಲಿ** ಮತ್ತು **ಮರಾಠಿ** ಭಾಷೆಗಳಿಂದ ಹರಿದ ಪ್ರಭಾವ. ಈ ಮಾತು ಕೇವಲ ಸಾಹಿತ್ಯಕ್ಕಷ್ಟೆ ಸೀಮಿತವಾಗದೆ, ರಾಜಕೀಯಕ್ಕೂ ಹಾಗೂ ಸಾಂಸ್ಕೃತಿಕ ಕ್ಷೇತ್ರಕ್ಕೂ ಸಂಬಂಧಿಸಿದುದಾಗಿದೆ. ಈ ಕಾಲದ ಲೇಖಕರು ತಮ್ಮ ಸಂಸ್ಕಾರ, ಸಂಸ್ಕೃತಿಯಲ್ಲಿ ಅಪಾರವಾದ ಕಾಳಜಿಯನ್ನು ಮತ್ತು ವಿಶೇಷವಾದ ಆಸಕ್ತಿಯನ್ನು ಹೊಂದಿದ್ದವರು. ಸನಾತನ ಧರ್ಮದ ಮೌಲ್ಯಗಳನ್ನು ನಂಬಿದವರೂ ಆಗಿದ್ದರು. ಸಾಂಸ್ಕೃತಿಕ ಸಂದರ್ಭದಲ್ಲಿಯೇ ಕಾದಂಬರಿ ರಚನೆಗೆ ಹೊರಟ **ಗುಲ್ವಾಡಿ ವೆಂಕಟರಾಯರು, ಬೋಳುವಾರು ಬಾಬುರವರು ಗಳಗನಾಥ, ಪುಟ್ಟಣ್ಣ,ಬಿ. ವೆಂಕಟಾಚಾರ್** ಈ ಎಲ್ಲ ಕಾದಂಬರಿಕಾರರ ಮನೋಧರ್ಮ ಬೇರೆ ಬೇರೆಯಾಗಿತ್ತು.

**ಲಕ್ಷ್ಮಣರಾವ್ ಗದಗಕರರ ಸೂರ್ಯಕಾಂತಿ, ಗುಬ್ಬಿ ಮುರುಗಾರಾಧ್ಯರ ಶೃಂಗಾರ ಚಾತುರ್ಯೋಲ್ಲಾಸಿನಿ**, ಗಳಗನಾಥರ ಪ್ರಬುದ್ಧ ನಯನೆ, ಗುಲ್ವಾಡಿ ವೆಂಕಟರಾಯರ ಇಂದಿರಾಬಾಯಿ ಇವೆಲ್ಲವುಗಳು ಗಮನಿಸಬೇಕಾದ ಕೃತಿಗಳು. ಗುಲ್ವಾಡಿ ಅಣ್ಣಾರಾಯರು 1899 ರಲ್ಲಿ ಒಂದು ಸಾಮಾಜಿಕ ಕಾದಂಬರಿಯನ್ನು ಬರೆದಿದ್ದರು. ಆದರೆ ಆಗಿನ ಕಾಲಕ್ಕೆ ಸಾಮಾಜಿಕ ಕಾದಂಬರಿಗಳು ಜನರ ಮನಸ್ಸಿನಲ್ಲಿ ನೆಲೆಯೂರಲಿಲ್ಲ, ಅದಕ್ಕೆ ಬದಲಾಗಿ ವೆಂಕಟಾಚಾರ್ ಮತ್ತು ಗಳಗನಾಥರ ಐತಿಹಾಸಿಕ ಕಾದಂಬರಿಗಳು ಜನರ ಮೆಚ್ಚುಗೆಗೆ ಪಾತ್ರವಾದವು. ಈ ಬಗೆಯ ಕಾದಂಬರಿ ಹುಟ್ಟದಿದ್ದರೆ ಕನ್ನಡದ ಸಾಮಾನ್ಯ ಜನರು ಸಾಹಿತ್ಯದ ಬಗ್ಗೆ ಆಸ್ಥೆಯನ್ನು ತಳೆಯಲು ಮತ್ತೆ ಕೆಲವರ್ಷಗಳು ಬೇಕಾಗುತ್ತಿದ್ದವು. ಈ ಕಾದಂಬರಿಗಳು ಜನತೆ ಹಾಗೂ ಸಾಹಿತ್ಯದ ನಡುವೆ ಸೇತುವೆಯಾಗಿ ನಿಂತವು. ಜನತೆಗೆ ಸಾಹಿತ್ಯದ ರುಚಿಯನ್ನು ಹತ್ತಿಸಿದವು.

ಸಾಮಾಜಿಕ ಕಾದಂಬರಿಗಳೆಂದು ಆಗಿನ ಕಾಲದಲ್ಲಿ ಪ್ರಮುಖವಾಗಿ ಗುರುತಿಸುವುದು **ಬೋಳುವಾರ ಬಾಬುರವರ ವಾಗ್ದೇವಿ ಎಂ.ಎಸ್. ಪುಟ್ಟಣ್ಣಯ್ಯನವರ ಮಾಡಿದ್ದುಣ್ಣೋ ಮಹರಾಯ ಹಾಗೂ ಕೆರೂರು ವಾಸುದೇವಾಚಾರ್ಯರ ಇಂದಿರೆ, ವಾಗ್ದೇವಿಯಲ್ಲಿ**, ವೈದಿಕ ಸಂಪ್ರದಾಯದ ಅವನತಿಯ ಚಿತ್ರವಿದ್ದರೆ, **ಮಾಡಿದ್ದುಣ್ಣೋ ಮಹರಾಯ**ದಲ್ಲಿ ವಾಸ್ತವತೆಯ ಆದರ್ಶವನ್ನು ಕಾಣುವ ಮಹತ್ವದ ನಡೆ ಇದೆ.

ನಿಜವಾದ ಕಲೆ ಮಣ್ಣು ಬಿತ್ತಿ ಹೊನ್ನು ಬೆಳೆಯಬಲ್ಲದು ಎಂಬುದಕ್ಕೆ ಈ ಕಾದಂಬರಿ ಸಾಕ್ಷಿಯಾಗಿದೆ. ನೀತಿಕತೆಗಳು, ದೃಷ್ಟಾಂತಗಳು, ದಂತ ಕತೆಗಳನ್ನು ತಮ್ಮ ಕೃತಿಯಲ್ಲಿ ದುಡಿಸಿಕೊಂಡಿದ್ದು, ಭಾರತೀಯ ಕಥಾ ಪ್ರಕಾರಗಳ ಸಾಧ್ಯತೆಗಳನ್ನು ತಮ್ಮ ಕೃತಿಗಳಲ್ಲಿ ಮೇಳವಿಸಿ ಅಚ್ಚ ದೇಸೀಯತೆಯಿಂದಾಗಿ ಇವರು ಕನ್ನಡ ಕಾದಂಬರಿಯ ಪ್ರಾರಂಭದ ಮಹತ್ವದ ಕಾದಂಬರಿಕಾರರಾಗಿದ್ದಾರೆ.

ಕನ್ನಡ ಕಾದಂಬರಿ ನವೋದಯ ಮತ್ತು ನವ್ಯ ಪರಂಪರೆಯಲ್ಲಿ ಸಮೃದ್ಧವಾಗಿ ಬೆಳೆಯಿತು. **ಶಿವರಾಮ ಕಾರಂತರ ಚೋಮನದುಡಿ, ದೇವದೂತರು, ಆನಂದ ಕಂದರ ಸುದರ್ಶನ, ರಾಜಯೋಗಿ ರಂ.ಶ್ರೀ.** ಮುಗುಳಿಯವರ **ಬಾಳುರಿ, ಅನಕೃರವರ ಜೀವನ ಯಾತ್ರೆ, ಉದಯರಾಗ, ಶ್ರೀರಂಗರ ವಿಶ್ವಾಮಿತ್ರ ಸೃಷ್ಟಿ, ಗೋಕಾಕರ ಇಜ್ಜೋಡು, ಜಡಭರತದ ಧರ್ಮಸೆರೆ, ಕುವೆಂಪುರವರ ಕಾನೂರು ಸುಬ್ಬಮ್ಮ ಹೆಗ್ಗಡತಿ ಮತ್ತು ಮಲೆಗಳಲ್ಲಿ ಮದುಮಗಳು** ಪ್ರಕಟವಾಗಿ ಪ್ರಸಿದ್ಧಿ ಪಡೆದವು. ಇದರಿಂದ ಕನ್ನಡದಲ್ಲಿ ಕಾದಂಬರಿ ಯುಗ ಪ್ರಾರಂಭವಾಯಿತು. 1920-1945 ರವರೆಗೆ ಸುಮಾರು 80 ಕಾದಂಬರಿಗಳು ಪ್ರಕಟಗೊಂಡವು.

**ವಿನಾಯಕ ಕೃಷ್ಣ ಗೋಕಾಕ**ರು 1951 ರಲ್ಲಿ **ಇಜ್ಜೋಡು** (ಸಮರಸವೇ ಜೀವನ) ಎಂಬ ಕಾದಂಬರಿ ಪ್ರಕಟಿಸಿದರು. ವಿಷಮ ದಾಂಪತ್ಯದಲ್ಲಿ ಬೆಂದು ಹೋದ ಸಹನೆಯ ಮೂರ್ತಿ ಪದ್ಮಾವತಿಯ ಕತೆ, ಕಾದಂಬರಿಯ ಕೇಂದ್ರ ಬಿಂದು. ಇಡೀ ಕಾದಂಬರಿ ಪಯಣದ ಅನುಭವವನ್ನು ಕೊಡುತ್ತದೆ. ಇದರಲ್ಲಿ ಬೌದ್ಧಿಕಾಂಶ ಎದ್ದು ಕಾಣುತ್ತದೆ. ನಾಟಕಕಾರರೆಂದು ಪ್ರಸಿದ್ಧರಾದ ಶ್ರೀರಂಗರು ಹಲವು ಕಾದಂಬರಿಗಳನ್ನು ಬರೆದಿದ್ದಾರೆ. ನಾಟಕಗಳನ್ನು ಬರೆಯದೇ ಹೋಗಿದ್ದರೆ ಕಾದಂಬರಿಕಾರರೆಂದೇ ಗಮನ ಸೆಳೆಯುತ್ತಿದ್ದರು. **ವಿಶ್ವಾಮಿತ್ರಸೃಷ್ಟಿ, ಪುರುಷಾರ್ಥ, ಪ್ರಕೃತಿ, ಅನಾದಿ, ವಿಷ, ಚಕ್ರವ್ಯೂಹ** ಮುಂತಾದ ಹತ್ತು ಕಾದಂಬರಿಗಳನ್ನು ಬರೆದಿದ್ದಾರೆ.

**ಪ್ರಗತಿಶೀಲ ಚಳುವಳಿ**ಯ ಪ್ರಮುಖ ಕೊಡುಗೆಯೆಂದರೆ ಕಾದಂಬರಿ ಮತ್ತು ಸಣ್ಣಕತೆಗಳ ಮನಕರಗುವ ವಿಭಿನ್ನ ಸೃಷ್ಟಿ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಅ.ನ.ಕೃಷ್ಣರಾಯರು ತಮ್ಮ ಸಾಹಿತ್ಯ ರಚನೆಗೆ ಅಶ್ಲೀಲ ಎಂದು ಯಾವ ವಿಷಯವನ್ನು ಹೊರಗಿಡಲಿಲ್ಲ. ಸಮಾಜದ ಆನೇಕ ಸಮಸ್ಯೆಗಳನ್ನು ವಸ್ತುವಾಗಿ ದುಡಿಸಿಕೊಂಡರು. ಅ.ನ.ಕೃಷ್ಣರಾಯರು ಕಾದಂಬರಿ ಲೋಕವನ್ನು ವಿಸ್ತರಿಸಿದ್ದಲ್ಲದೆ, ಹೊಸ ಹೊಸ ವಸ್ತುಗಳನ್ನು ಆರಿಸಿ ನಿಸ್ಸಂಕೋಚವಾಗಿ ಬರೆಯುವುದನ್ನು ಸಾಧ್ಯ ಮಾಡಿಕೊಟ್ಟರು. **ತ.ರಾ.ಸು., ನಿರಂಜನ, ಅರ್ಚಕ ವೆಂಕಟೇಶ, ನಾಡಿಗೇರ ಕೃಷ್ಣರಾವ್, ಬಸವರಾಜ ಕಟ್ಟೀಮನಿ** ಮುಂತಾದವರೆಲ್ಲ ಪ್ರಗತಿಶೀಲ ಮಾರ್ಗದಲ್ಲಿ ಬರೆದರು. **ತ.ರಾ.ಸು.**

**ಮುಂಜಾವಿನಿಂದ ಮುಂಜಾವು, ಪುರುಷಾವತಾರ, ನಾಗರಹಾವು, ಮಾರ್ಗರೇಟ್, ಹಂಸಗೀತೆ, ಬಿಡುಗಡೆಯ ಬೇಡಿ** ಮುಂತಾದವುಗಳನ್ನು ರಚಿಸಿದರು. **ಕಟ್ಟೀಮನಿಯವರ ಮೋಹದ ಬಲೆಯಲ್ಲಿ, ಜರತಾರಿ ಜಗದ್ಗುರು, ಖಾನಾವಳಿಯ ನೀಲ** ಮುಂತಾದವುಗಳನ್ನು ಬರೆದರು. **ನಿರಂಜನರು ಚಿರಸ್ಮರಣೆ, ಮೃತ್ಯುಂಜಯ** ಕೃತಿಗಳನ್ನು ಬರೆದರು. ಈ ಎರಡೂ ಕಾದಂಬರಿಗಳು ಇಂದಿಗೂ ಅತ್ಯಂತ ಪ್ರಮುಖ ಕಾದಂಬರಿಗಳು ಎನಿಸಿಕೊಂಡಿವೆ.

ನವೋದಯ ಸಾಹಿತ್ಯ ಇಂಗ್ಲಿಷ್ ಸಾಹಿತ್ಯದ ಶೇಕ್ಸ್‌ಪಿಯರ್, ಮಿಲ್ಟನ್, ವಾಲ್ಟರ್, ಸ್ಕಾಟ್‌ರ ಪ್ರಭಾವಕ್ಕೆ ಒಳಗಾದರೆ, ಪ್ರಗತಿಶೀಲ ಸಾಹಿತ್ಯ ಫ್ರಾನ್ಸ್‌ನ ಮೊಪಾಸ್, ಎಮಿಲ ಜೋಲಾ, ನಾವೇಯ ಇಬ್ಸನ್, ರಷ್ಯಾದ ಮ್ಯಾಕ್ಸಿಂ ಗಾರ್ಕಿ ಮುಂತಾದ ಪ್ರಭಾವಕ್ಕೆ ಒಳಗಾಯಿತು. ಅದೇ ರೀತಿ ನವ್ಯ ಸಾಹಿತ್ಯ ಇಂಗ್ಲೇಂಡಿನ ಲಾರೆನ್ಸ್ ಬೆಕೆಟ್, ಅಮೇರಿಕಾದ ಸ್ಯಾಲಿಂಗರ್ ಫ್ರಾನ್ಸ್‌ನ ಕಾಮೂ, ಜರ್ಮನಿಯ ಫ್ರಾನ್ಸ್ ಕಾಫ್ಕಾ ಮೊದಲಾದವರ ಪ್ರಭಾವಕ್ಕೆ ಒಳಗಾಯಿತು.

ಮೇಲಿನ ಎಲ್ಲಾ ವಿವರಣೆಗಳ ಹಿನ್ನೆಲೆಯಲ್ಲಿ ಶಾಂತಿನಾಥ ದೇಸಾಯಿ ಅವರ ಸ್ಥಾನ ಯಾವುದು ಎಂಬುದನ್ನು ಇಲ್ಲಿ ನಿರ್ಧರಿಸಬೇಕಾಗಿದೆ.

---

**ಅಡಿ ಟಿಪ್ಪಣಿ**

(1) ಕನ್ನಡ ಕಥನ ಸಾಹಿತ್ಯ : ಕಾದಂಬರಿ ಪು.9

(2) ಕನ್ನಡ ನವ್ಯ ಕಾದಂಬರಿಗಳು – ಡಾ. ಕೆ. ವಿಜಯಶ್ರೀ – ಮುನ್ನುಡಿ

## ಅಧ್ಯಾಯ ೩ : ನವ್ಯ ಸಾಹಿತ್ಯ ಸಂದರ್ಭ ಮತ್ತು ಶಾಂತಿನಾಥ ದೇಸಾಯಿ

ನವೋದಯದವರ ಒತ್ತು ಸಮೂಹದ ಮೇಲಿದ್ದರೆ. 'ನವ್ಯ'ದಲ್ಲಿ ವ್ಯಕ್ತಿಯ ಮೇಲಿರುತ್ತದೆ. ಇದು ವ್ಯಕ್ತಿಯ ಅಸ್ತಿತ್ವವನ್ನು, ಮನುಷ್ಯನ ಸ್ಥಿತಿಯನ್ನು ಮೂಲಭೂತ ಪ್ರಶ್ನೆಗಳನ್ನು ಶೋಧನೆಗೆ ಒಳಪಡಿಸುತ್ತದೆ. ಮತ್ತು ವ್ಯಕ್ತಿಯ ಮನಸ್ಸಿನಲ್ಲಿ ಮೂಡಿಸುವ ಪ್ರತಿಕ್ರಿಯೆಗಳು ನವ್ಯರಿಗೆ ಮುಖ್ಯವಾಗಿರುತ್ತವೆ. ಈ ಮೂಲಕ ವ್ಯಕ್ತಿ ವಿಶಿಷ್ಟ ಪ್ರಜ್ಞೆಯು ಬದುಕನ್ನು ನೋಡುವ ಪರಿಪಾಠ ಜಾರಿಗೆ ಬಂತು. ವ್ಯಕ್ತಿಯ ಒಳಮನಸ್ಸಿನ ವಿಶ್ಲೇಷಣೆಗೆ ಸ್ವಾನುಭವದಲ್ಲಿ ಕಂಡುಕೊಂಡ ಅನುಭವದ ಪರೀಕ್ಷೆಯಲ್ಲಿ ಬದುಕನ್ನು ಅರಿಯುವ ಪ್ರಯತ್ನ ಪ್ರಾರಂಭವಾಯಿತು.(1)

ಸ್ವಾತಂತ್ರೋತ್ತರ ಭಾರತದಲ್ಲಿ ನವ್ಯ ಚಳುವಳಿ ಹಿಂದಿನ ಎಲ್ಲಾ ಸಾಹಿತ್ಯ ಚಳುವಳಿಗಳಿಗಿಂತ ಭಿನ್ನವಾಗಲೇಬೇಕಾದ ಅನಿವಾರ್ಯತೆ ಇತ್ತು, ಮತ್ತು ಹೊಸ ಚಳುವಳಿಯು ಭವ್ಯಭಾರತದ ರೂಪು ರೇಷೆಯನ್ನು ರೂಪಿಸುವ ಜರೂರು ಅದಕ್ಕಿತ್ತು. ನವೋದಯದಂತೆ ಸಾಮಾಜಿಕ, ಪ್ರಕೃತಿ ಪ್ರೇಮ, ದೈವ ಮೊರೆ, ನವಿರು ಭಾವ, ದೇವರ ಲೀಲೆ, ಇವೆಲ್ಲ ಅರ್ಥ ಕಳೆದುಕೊಂಡು ಸ್ವಕೀಯತೆ, ವ್ಯಕ್ತಿನಿಷ್ಠ, ವ್ಯಕ್ತಿ ಸ್ವಾತಂತ್ರ ಮುಂತಾದ ವಿಚಾರಗಳಲ್ಲಿ ಹೆಚ್ಚು ಮನಸ್ಸು ಮಾಡಿದ್ದು ಆ ಕಾಲದಲ್ಲಿ ರಚನೆಯಾದ ನವ್ಯ ಸಾಹಿತ್ಯದಿಂದ ತಿಳಿದುಬರುತ್ತದೆ. ನವ್ಯ ಕಾದಂಬರಿಯ ನಾಯಕರು ದುರ್ಬಲರು, ಅಂತರ್ಮುಖತೆ ಅವರ ಪ್ರಧಾನ ಅಂಶ. ಆದರ್ಶವಾದ ಎಂಬ ಮೌಲ್ಯವೇ ಇವರಿಗೆ ಇಲ್ಲ. ನವ್ಯ ಕಾದಂಬರಿಯ ನಾಯಕರು ಸಾಂಪ್ರದಾಯಕ ಸಮಾಜದ ಎಲ್ಲೆಯನ್ನು ಮುರಿದು ಹೊಸ ಸಮಾಜದ ನಿರ್ಮಾಣದತ್ತ ಸಕ್ರಿಯರಾಗಿದ್ದವರು ಆಗಿದ್ದರು. ಆದ್ದರಿಂದಲೆ ನವ್ಯ ಕಾದಂಬರಿಗಳು ಹೆಚ್ಚು ಸೂಕ್ಷ್ಮತೆಯನ್ನು, ಹೆಚ್ಚು ವಿಷಮತೆಯನ್ನು, ವಿಕ್ಷಿಪ್ತತೆಯನ್ನು ಪಡೆಯುತ್ತಲೇ ಅಸಂಗತವಾದ ಆಲೋಚನೆಗಳಲ್ಲಿ ಮಿಂದೆದ್ದಿತು. ಇದೆಲ್ಲವನ್ನು ಕಟ್ಟಲು ಕನ್ನಡ ಭಾಷೆ ಸಹಾಯಕವಾಯಿತು. ನವ್ಯ ಚಳವಳಿಯು ಸಂಪೂರ್ಣವಾಗಿ, ವಿಶಾಲತೆಯಿಂದ ಸಂಕೀರ್ಣತೆಯ ಕಡೆಗೆ ನಡೆಯಿತು. ಇದು ನವಸಮಾಜದ ಒಂದು ಹೊಸ ನೋಟಕ್ಕೆ ನಾಂದಿಯಾಯಿತು.

"ನವ್ಯ ಕಾದಂಬರಿಯ ಸಂಕೀರ್ಣ ಕಾಲಪ್ರಜ್ಞೆ ಮತ್ತು ಪ್ರಬಂಧ ಧ್ವನಿಯತ್ತ ಅದು ಕೊಡುವ ಹೊಸ ಲಕ್ಷ್ಯ, ಅದನ್ನು ವಾಸ್ತವ ಮಾರ್ಗದ ಕಾದಂಬರಿಗಳಿಂದ ಬೇರ್ಪಡಿಸಿ ತೋರಿಸುತ್ತವೆ. ಕಾದಂಬರಿಯ ಅಂಗಗಳಲ್ಲಿ ಒಟ್ಟಾಗಿ ದುಡಿಯಬೇಕು. ಅದರ ವಿವರಗಳಲ್ಲಿ ಭಾಷೆಯಲ್ಲಿ ನಿಜವಾಗಬೇಕು ಎಂಬ ಹೊಸ ಅರಿವನ್ನು ಪಡೆಯುವುದರ ಮೂಲಕ ಮಾಧ್ಯಮದ ಬಗ್ಗೆ ಹೊಸ ತಿಳಿವನ್ನು ಹುಟ್ಟಿಸುವಲ್ಲಿ ನವ್ಯ

ಕಾದಂಬರಿ ಯಶಸ್ವಿಯಾಯಿತು.[2] ಎಂಬ ಮಾತಿನಂತೆ ನವ್ಯ ಕಾದಂಬರಿಗಳು ಹೊಸ ಓದುವ ವರ್ಗವನ್ನು ಮತ್ತು ವಾಸ್ತವತೆಯ ಅರಿವನ್ನು ಮೂಡಿಸಲು ಮುಂತಾದವು.

ಈ ಹಿನ್ನೆಲೆಯಲ್ಲಿ ತಮ್ಮನ್ನು ಗುರುತಿಸಿಕೊಂಡ ಶಾಂತಿನಾಥ ದೇಸಾಯಿ ಅವರು 1961 ರಲ್ಲಿ 'ಮುಕ್ತಿ' ಕಾದಂಬರಿಯನ್ನು ಪ್ರಕಟಿಸಿದರು. ನವ್ಯ ಸಾಹಿತ್ಯದ ಎಲ್ಲಾ ಆಶಯಗಳನ್ನು ಈ ಕಾದಂಬರಿಯಲ್ಲಿ ಒಡ ಮೂಡಿಸಿದರು. ಸಾಹಿತ್ಯ ಚಳುವಳಿ ತನ್ನ ಅಗಾಧತೆ ಮತ್ತು ವಿಸ್ತಾರವನ್ನು ಹೇಗೆ ಹರಡಿಕೊಂಡಿತು ಎಂಬ ಪ್ರಶ್ನೆಗೆ ಈ ಕಾದಂಬರಿ ನಮಗೆ ಉದಾಹರಣೆಯಾಗಿ ಸಿಕ್ಕುತ್ತದೆ. ಇದೇ ಸಂದರ್ಭದಲ್ಲಿ ರಚನೆಯಾದ ಅವರ ಸಣ್ಣಕತೆ ಮಂಜುಗಡ್ಡೆ (1959) ನವ್ಯ ಕತೆಗಳ ಪ್ರಾರಂಭದ ಸಂಕಲನಗಳಲ್ಲೊಂದು. ಆನಂತರ ಬಂದಂತಹ **ಕ್ಷಿತಿಜ** (1966), **ದಂಡೆ** (1971), **ರಾಕ್ಷಸ** (1977) **ಕೆಲವು ಆಯ್ದು ಕತೆಗಳು** (1977), **ಪರಿವರ್ತನೆ** (1980), **ಕೂರ್ಮಾವತಾರ** (1988) ಈ ಎಲ್ಲಾ ಕತೆಗಳ ನವ್ಯದ ಜಾಡಿನಲ್ಲಿ ಹೊರಬಂದುವು. ಅದರ ಜೊತೆಗೆ ಅವರ ಕಾದಂಬರಿಗಳು **ಮುಕ್ತಿ** (1961), **ವಿಕ್ಷೇಪ** (1971), **ಸೃಷ್ಟಿ** (1979), **ಸಂಬಂಧ** (1982), **ಬೀಜ** (1983), **ಅಂತರಾಳ** (1993), **ಓಂ ಣಮೋ** (1999) ಎಲ್ಲಾ ಬರವಣಿಗೆಯ ಅವರನ್ನು ನವ್ಯದ ಪ್ರಮುಖ ಲೇಖಕರನ್ನಾಗಿ ಮಾಡಿದವು. ನವ್ಯ ಲೇಖಕರೆಂದೆ ಜನಪ್ರಿಯರಾದ ಶಾಂತಿನಾಥ ದೇಸಾಯಿ **'ನವ್ಯ ಸಾಹಿತ್ಯ ದರ್ಶನ'** (1989) ರಲ್ಲಿ ಬರೆಯುವ ಮೂಲಕ ತಮ್ಮ ಬರವಣಿಗೆಯ ಎಲ್ಲಾ ನವ್ಯ ವಿಚಾರಗಳನ್ನು ಮತ್ತು ಆ ಕಾಲದ ಪ್ರತಿಸ್ಪಂದನೆಯನ್ನು ದಾಖಲಿಸಿದರು.

ನವ್ಯ ಸಾಹಿತ್ಯ ಮತ್ತು ಚಳುವಳಿಗಳ ಬಗ್ಗೆ ಅಪಾರ ಒಲವು ಹೊಂದಿದ್ದ ದೇಸಾಯಿ ಅವರು ಈ ಚಳುವಳಿಗೆ ಮುಖ್ಯ ಪ್ರೇರಣೆ ಇಂಗ್ಲಿಷ್ ಸಾಹಿತ್ಯ ಮತ್ತು ಬೇರೆ ಬೇರೆ ದೇಶಗಳಲ್ಲಿ ನಡೆದ ಕ್ರಾಂತಿಗಳು (ರಷ್ಯನ್ ಕ್ರಾಂತಿ 1917 ಫ್ರಾನ್ಸ್ ಕ್ರಾಂತಿ 1879) ಎಂಬುದು ದಟ್ಟನಾಗಿದ್ದರೂ ಇಂಗ್ಲಿಷ್ ಸಾಹಿತ್ಯದಿಂದ ಬಂದದ್ದೆಲ್ಲ ಶ್ರೇಷ್ಠ ಎಂಬ ಭಾವನೆಯಿಂದ ಬರೆಯಲಿಲ್ಲ. ಇವರ ಬಗ್ಗೆ ಅವರ ನಿಲುವು ತೀರ ಸ್ಪಷ್ಟವಾಗಿತ್ತು. "ಪ್ರಭಾವಗಳ ಬಗ್ಗೆ ಚರ್ಚೆ ಮಾಡುವಾಗ 'ಕಡ' ತಂದದ್ದು ಕದ್ದು ತಂದದ್ದು ಎಂಬ ಶಬ್ಧ ಪ್ರಯೋಗ ನನಗೆ ಎಳ್ಳಷ್ಟು ಸಮ್ಮತವಿಲ್ಲ" ಎಂದು ನವ್ಯ ಸಾಹಿತ್ಯ ವಿಮರ್ಶೆಯಲ್ಲೆ ಅವರು ಹೇಳಿದ್ದಾರೆ. ದೇಶಿವಾದ ಗಾಂಧೀವಾದಕ್ಕಿಂತ ಅಂತಾರಾಷ್ಟ್ರೀಯ ಸ್ವರೂಪದ ಮಾರ್ಕ್ಸ್‌ವಾದ, ರಾಯ್ ಪ್ರಣೀತ ನವ ಮಾನವತಾವಾದ ಹಾಗೂ ಅಸ್ತಿತ್ವವಾದಗಳೇ ಅವರನ್ನು ಹೆಚ್ಚು ಬಲವಾಗಿ ಆಕರ್ಷಿಸಿದವು. ವೈಚಾರಿಕತೆಯ ಬಗ್ಗೆ ಅವರೇ ಹೇಳುವಂತೆ "ನನ್ನದು ಮಾರ್ಕ್ಸ್ ಪ್ರಭಾವಿತವಾದ ಅಸ್ತಿತ್ವವಾದಿ ಮಾನವತಾವಾದ.

ನಾನು ಮಾರ್ಕ್ಸ್‌ವಾದವನ್ನು ಸ್ವಲ್ಪ ಇಟ್ಟುಕೊಂಡು ನವ ಮಾನವತಾವಾದವನ್ನು ಸ್ವೀಕರಿಸಿ ನನ್ನದೇ ಆದ ನನ್ನ ಸಂವೇದನೆಯ ಕೇಂದ್ರ ಪ್ರವೃತ್ತಿಯಾದ, ಅಸ್ತಿತ್ವವಾದವನ್ನು ಬಿಡದೆ ಜೀವನವನ್ನು ಅನುಭವಿಸುವ ದೃಷ್ಟಿಕೋನವನ್ನು ಬೆಳೆಸಿಕೊಂಡಿದ್ದೇನೆ. ನನ್ನ ಕಾದಂಬರಿಗಳ ಮೂಲ ಪ್ರೇರಣೆ ನನ್ನ ಈ ದೃಷ್ಟಿಕೋನ ನನ್ನ ಸಾಹಿತ್ಯ ವಿಮರ್ಶೆಯಲ್ಲಿಯ ಮಾನದಂಡಗಳು ಈ ದೃಷ್ಟಿಕೋನದಿಂದಲೇ ಪ್ರೇರಿತವಾದವುಗಳು" ಎಂದು ತಮ್ಮ ನವ್ಯ ಸಾಹಿತ್ಯ ವಿಮರ್ಶೆಯ ಬರವಣಿಗೆಯಲ್ಲಿ ವಿವರಿಸಿದ್ದಾರೆ.

ನವ್ಯ ಸಾಹಿತ್ಯ ಎನ್ನುವುದು ವ್ಯಕ್ತಿಗತ ನೆಲೆಯನ್ನು, ಮನುಷ್ಯ ಸಂಬಂಧಗಳನ್ನು ಅರ್ಥೈಸಲು ನಡೆಸಿದ ಪ್ರಯತ್ನವೆಂಬುದು ನಿರ್ವಿವಾದ. ಕನ್ನಡದಲ್ಲಿ ಸ್ವಾತಂತ್ರೋತ್ತರ ಭಾರತದ ಸನ್ನಿವೇಶಗಳು ಮತ್ತು ಸವಾಲುಗಳು ನವ್ಯ ಸಾಹಿತ್ಯದ ಮೂಲಾಂಶಗಳನ್ನು ಮತ್ತು ಮೂಲ ಸ್ವರೂಪಗಳನ್ನು ನಿರ್ಧರಿಸುವಲ್ಲಿ ಯಶಸ್ವಿಯಾಯಿತು. ಇದಕ್ಕೆ ಹಿನ್ನೆಲೆಯಾಗಿ ಕನ್ನಡ ಸಾಹಿತ್ಯದಲ್ಲಿ ಪ್ರಭಾವ ಬೀರಿದ ಯೂರೋಪಿನ ಸಂದರ್ಭವನ್ನು ಪ್ರಾಸಂಗಿಕವಾಗಿ ನಾವಿಲ್ಲಿ ಸೂಚಿಸಬಹುದು. ಎರಡನೇ ಮಹಾಯುದ್ಧ ಎನ್ನುವುದು ಯೂರೋಪಿನ ನವ್ಯ ಸಾಹಿತ್ಯವನ್ನು ಹೇಗೆ ರೂಪಿಸಿತೋ ಹಾಗೆಯೇ ಭಾರತದ ನವ್ಯ ಸಾಹಿತ್ಯ ಜನತಂತ್ರಕ್ಕೆ ಎದುರಾದ ಸವಾಲುಗಳಾಗಿ ಕಂಡಿದ್ದು ಒಂದು ಪ್ರಮುಖ ಸಂಗತಿ. ತಾತ್ವಿಕವಾಗಿ ನವ್ಯ ಸಾಹಿತ್ಯವನ್ನು ನಿರ್ಧರಿಸಿದ ಸಂಗತಿಗಳು ಇವೇ ಆದರೂ ಅದರ ವಸ್ತುವನ್ನು ನಿರ್ಧರಿಸಿದ ಸಂಗತಿಗಳು ಬೇರೆ. ನವ್ಯ ಸಾಹಿತ್ಯದ ಭಾಷೆ, ಶರೀರ ಮುಂತಾದುವು ಹೊಸ ಭಾಷಾ ರಚನೆಗೆ ಹೊಸ ಆಯಾಮವನ್ನು ನೀಡಿತು.

ವಸ್ತು ಭಾಷೆ, ಶೈಲಿಗಳಲ್ಲಿ ವಿನೂತನ ಸಾಧ್ಯತೆಗಳನ್ನು ನವ್ಯ ಸಾಹಿತ್ಯ ಸಂದರ್ಭಗಳಲ್ಲಿ ಶೋಧಿಸಿ ಕಾದಂಬರಿಕಾರರು ಕನ್ನಡಕ್ಕೆ ನೀಡಿದ್ದು ಮಹತ್ವದ ಅಂಶ. ಇಂತಹ ಕೆಲವು ಕಾದಂಬರಿಗಳು ಮತ್ತು ಕಾದಂಬರಿಕಾರರು ಎಂದರೆ **ಲಂಕೇಶ (ಮುಸ್ಸಂಜೆ ಕಥಾ ಪ್ರಸಂಗ, ಅಕ್ಕ) ಪೂರ್ಣಚಂದ್ರ ತೇಜಸ್ವಿ (ಚಿದಂಬರ ರಹಸ್ಯ, ಕರ್ವಾಲೋ, ಕಿರಿಗೂರಿನ ಗಯ್ಯಾಳಿಗಳು) ಅನಂತಮೂರ್ತಿ** (**ಸಂಸ್ಕಾರ, ಭಾರತೀಪುರ, ಅವಸ್ಥೆ) ಮತ್ತು ಶಾಂತಿನಾಥ ದೇಸಾಯಿ (ಮುಕ್ತಿ, ವಿಕ್ಷೇಪ, ಓಂ ಣಮೋ)** ಮುಂತಾದವರು.

ಕನ್ನಡದಲ್ಲಿ ನವ್ಯಾಂಶಗಳನ್ನು ಸ್ಪಷ್ಟವಾಗಿ ಗುರುತಿಸಬಹುದಾದ ಕೃತಿ ದೇಸಾಯಿಯವರ ಮುಕ್ತಿ ಕಾದಂಬರಿ. ಆಧುನಿಕತೆ ಮತ್ತು ಬೌದ್ಧಿಕತೆಗಳನ್ನು ತಮ್ಮ ಪಾತ್ರಗಳ ಸಂವೇದನೆಯಾಗಿ ತಂದು ಯಶಸ್ವಿಯಾದವರು ಶಾಂತಿನಾಥ ದೇಸಾಯಿ.

ಮುಕ್ತಿ ಶೀರ್ಷಿಕೆಯು ಸಾವಿನ ಜೊತೆಯಲ್ಲಿ ಸಾವಿನ ನಂತರದ ಸ್ಥಿತಿ ಎನ್ನುವ ಪರಮಾರ್ಥಿಕ ಅರ್ಥವನ್ನು ಸಂಪೂರ್ಣವಾಗಿ ನಿರಾಕರಿಸುತ್ತದೆ. ಸರಳವಾಗಿ ಹೇಳಬೇಕೆಂದರೆ ಮುಕ್ತಿ ಕಾದಂಬರಿಯಲ್ಲಿ ನಿಜಕ್ಕೂ ಹೊಸ ಮನುಷ್ಯನ ಚಹರೆಗಳು ಎದ್ದು ಕಾಣುತ್ತವೆ.

ಮುಕ್ತಿಯ ಗೌರೀಶನ ವ್ಯಕ್ತಿತ್ವ ಅವನ ತುಮುಲಗಳು, ಪ್ರಾರಂಭದಲ್ಲಿ ವಯೋ ಸಹಜ ಎಂದೆನಿಸಿದರೂ ಅವನ ಮನಸ್ಸಿನ ಮೇಲೆ ಸ್ಥಾಯಿಯಾಗಿ ನಿಲ್ಲುವವರು ಶ್ರೀಕಾಂತ ಮತ್ತು ಶ್ರೀಕಾಂತನ ತಂಗಿ ಕಾಮಿನಿ ಮಾತ್ರ. ಕಾಮಿನಿಯನ್ನು ಪ್ರೀತಿಸುತ್ತಲೆ ಕಡೆಗೆ ಅವಳ ವರ್ತನೆಯಿಂದ ಬೇಸರಗೊಂಡು, ಅವಳ ಅದಮ್ಯ ಕಾಂತಶಕ್ತಿಯಿಂದ ಬಿಡಿಸಿಕೊಳ್ಳಲು ಡಾಲಿಯೊಂದಿಗೆ ಆಫ್ರಿಕಾಗೆ ಹೊರಡುತ್ತಾನೆ ಗೌರೀಶ. ಕಾದಂಬರಿಯ ಕಡೆಯವರೆಗೂ ಕಾಮಿನಿಗ ಬಗ್ಗೆ ಒಲವಿದ್ದ ಗೌರೀಶ ಕಡೆಯಲ್ಲಿ ಕಾಮಿನಿ ಕೇಳಕೊಂಡರು ಅದಕ್ಕೆ ನೇರವಾದ ಉತ್ತರ ಕೊಡದೆ ಅವಸರ ಪಟ್ಟಂತೆ ಆಫ್ರಿಕಾಗೆ ಹೊರಡುವುದು ನವ್ಯದ ವ್ಯಕ್ತಿ ಕೇಂದ್ರಿತ ವಾದಕ್ಕೆ ಉತ್ತಮ ಉದಾಹರಣೆಯಾಗಿ ನಿಲ್ಲುತ್ತದೆ.

**ವಿಕ್ಷೇಪ** ಕಾದಂಬರಿ ರಾಹುಲ ಕೇಂದ್ರಿತವಾದರೂ, ಇದೂ ಕೂಡ ರಾಹುಲನ ವಿಕ್ಷಿಪ್ತ ವ್ಯಕ್ತಿತ್ವವನ್ನು ಅನಾವರಣಗೊಳಸುತ್ತದೆ. ಮೊದಲು ಮಾಧವಿಯಲ್ಲಿ ಅನುರಕ್ತನಾಗುವ ರಾಹುಲ ಮದುವೆಗೆ ಮುನ್ನವೇ ಅವಳೊಂದಿಗೆ ದೈಹಿಕ ಸಂಪರ್ಕಕ್ಕೆ ಹಾತೊರೆಯುತ್ತಾನೆ, ಆದರೆ ಅದು ಸಾಧ್ಯವಾಗದಿದ್ದಾಗ ಮರೀಚಿಯಾಗಿರುವ ವೈದೇಹಿಯ ಕಡೆ ಒಲಿಯುತ್ತಾನೆ. ಆದರೆ ಅವಳು ಸಿಗುವುದಿಲ್ಲ ಎಂಬ ಸತ್ಯ ಅರಿವಾಗುತ್ತಿದ್ದಂತೆ 'ಕುಂದಳ'ನ್ನು ಮದುವೆಯಾಗಿ ಸುಖಿಸುತ್ತಾನೆ. ಆದರೆ ಅವಳಲ್ಲಿಯೂ ಸಂಪೂರ್ಣವಾಗಿ ಅನುರಕ್ತನಾಗದೆ ಅವಳನ್ನು ಬಿಟ್ಟು ಹೊರಡುತ್ತಾನೆ. ಅದು ಅದನ್ನು ಅವಳಗೆ ಹೇಳಯೇ ಹೊರಡುತ್ತಾನೆ.

**ಸೃಷ್ಟಿ** ಕಾದಂಬರಿಯಲ್ಲಿ ಎರಡು ಮಜಲುಗಳು ಕಂಡುಬರುತ್ತದೆ. ಈ ಕಾದಂಬರಿಯಲ್ಲಿ ಕಾದಂಬರಿಕಾರ ಮತ್ತು ಓದುಗರ ಮಧ್ಯೆ ಸಂವಾದ ಸೃಷಿಯಾಗುವಂತೆ ಮುಂದುವರಿಯುತ್ತದೆ. ಕನ್ನಡ ಕಾದಂಬರಿಯಲ್ಲೇ, ಅದರಲ್ಲೂ ನವ್ಯದಲ್ಲಿ ಇದು ತೀರ ಹೊಸ ಪ್ರಯೋಗ ಕಾದಂಬರಿಕಾರ ಪ್ರಾರಂಭದಲ್ಲಿಯೇ "ಒಂದು ದೃಷ್ಟಿಯಿಂದ ಈ ಕಾದಂಬರಿಯನ್ನು ನಾನು ನೀನು ಕೂಡೇ ಬರೀಲಿಕ್ಕೆ ಹತ್ತೀವಿ" ಎಂದು ಹೇಳುತ್ತಾನೆ. ಇಡೀ ಕಾದಂಬರಿ ಈ ರೀತಿಯ ಹಲವಾರು ಸಂವಾದಗಳು ಮತ್ತು ಕಾದಂಬರಿಯ ಪಾತ್ರ ಬೆಳವಣಿಗೆಯ ಸಾಧ್ಯತೆಗಳ ಬಗ್ಗೆ ಚರ್ಚಿಸುತ್ತಲೆ ವಿಭಿನ್ನ ಅನುಭವ ನೀಡುತ್ತದೆ. ಅಂದರೆ ನವೋದಯ ವಸ್ತು–ವಿನ್ಯಾಸ ಕ್ರಮಗಳನ್ನೆಲ್ಲ ಮುರಿದು ಈ ರೀತಿಯೂ ಅಭಿವ್ಯಕ್ತಿಸಬಹುದೆಂದು ತೋರಿಸಿಕೊಟ್ಟಿದ್ದು

ಶಾಂತಿನಾಥ ದೇಸಾಯಿ. ಈ ಸೃಷ್ಟಿ ಕಾದಂಬರಿಯ ಬಗ್ಗೆ ಅವರೇ ವಿವರಿಸುವಂತೆ "ನನ್ನ ಮೂರನೇ ಕಾದಂಬರಿ ಸೃಷ್ಟಿ ಸಂಪ್ರದಾಯದ ತಳಹದಿಯನ್ನು ಕಳೆದುಕೊಂಡ ರಾಯ್‌ವಾದಿಯ ಮೂಲಭೂತ ತೊಳಲಾಟವನ್ನು ಪರಿಶೋಧಿಸುತ್ತದೆ. ಕಾದಂಬರಿಯ ಪೂರ್ವಾರ್ಧ- ದಲ್ಲಿ ನಾಯಕ ದೇವಧರ, ಒಬ್ಬ ಪ್ರೊಫೆಸರ್ ಆಗಿರುತ್ತಾನೆ. ಆದರೆ ಅನಂತರ ಪ್ರೊಫೆಸರ್‌ನು ಕ್ಯಾಡ್‌ನೋ, ಡ್ಯಾಂಡಿಯೋ ಆಗಿ ನೈತಿಕ ತಾಟಸ್ಥ್ಯದಿಂದ ಜೀವನವನ್ನು ಎಂಜಾಯ್ ಮಾಡುತ್ತಾನೆ. ಆದರೆ ಇದೇ ದೇವಧರ್ ಕಾದಂಬರಿಯ ಉತ್ತರಾರ್ಧದಲ್ಲಿ ಅದೇ ನಾಯಕ ಕ್ರಿಯಾಶೀಲ ಮಾನವನಾಗಿ ಡಾಕ್ಟರ್ ದೇವಧರ್‌ನಾಗಿ ಪುನರ್ಜನ್ಮ ಪಡೆಯುತ್ತಾನೆ. ಆದರೆ ಈ ಹಾದಿಯೂ ಸಹ ಭ್ರಷ್ಟ ಸಮಾಜದೊಂದಿಗೆ ದುರಂತಮಯ ಹೋರಾಟಕ್ಕೆ ಅವನನ್ನು ಗುರಿ ಮಾಡುತ್ತಾನೆ.

ಇನ್ನು **ಸಂಬಂಧ** ಕಾದಂಬರಿಯ ವಸ್ತುವು ಸಹ ಸಮಾಜದೊಂದಿಗೆ ಲೇಖಕನೊಬ್ಬನ ಮುಖಾಮುಖಿಯಾಗಿರುತ್ತದೆ. ಇದರ ಕಥಾನಾಯಕ ಶೀತಲ ಕುಮಾರ ಒಬ್ಬ ಒಳ್ಳೆ ಕಾದಂಬರಿಕಾರ. ಅವನ ಏಳನೆಯದೋ, ಎಂಟನೆಯದೋ ಕಾದಂಬರಿ ಚಲನಚಿತ್ರವಾಗುತ್ತಿದೆ. ಆ ಕಾದಂಬರಿಯ ಹೆಸರು **'ಸಂತೆಯೊಳಗೊಂದು ಮನೆ'** ಅದೇ ರೀತಿ ಅವನ ಇತರ ಕಾದಂಬರಿಗಳಾದ ಹರಿದ ನೀರು, ವಿರಸ ಮರಣ, ಹೊತ್ತಿಲ್ಲದ ಹೊತ್ತು ತುಂಬ ಜನಪ್ರಿಯವಾಗಿವೆ. ಅಂತೆಯೇ ಶೀತಲಕುಮಾರ ಮತ್ತೊಂದು ಕಾದಂಬರಿಯ ಸೃಷ್ಟಿಗಾಗಿ ಕೊಲ್ಹಾಪುರದ ತನ್ನ ಮಿತ್ರ **ಡಾ॥ ಪರಮೇಶ್ವರಯ್ಯ (ಉರುಫ್ ಪೂಮ್ಮಣ್ಣ)** ನವರನ್ನು ಭೇಟಿಯಾಗುವ ಸಂದರ್ಭದೊಂದಿಗೆ ಕಾದಂಬರಿ ಆರಂಭವಾಗುತ್ತದೆ. ಶೀತಲಕುಮಾರ ತನ್ನನ್ನು ಬುದ್ಧಿವಾದಿ, ಭೌತಿಕವಾದಿಯೆಂದು ಗುರುತಿಸಿಕೊಳ್ಳುತ್ತಾನೆ. ಹಾಗೂ ತಾನೊಬ್ಬ ಬೇರಿಲ್ಲದ ಮನುಷ್ಯ ಎಂದು ಹೇಳಿಕೊಳ್ಳುತ್ತಾನೆ. ತನ್ನ ವ್ಯಕ್ತಿತ್ವದ ಬಗ್ಗೆ ಅವನೇ ಹೇಳುವಂತೆ "ನನಗೆ ನನ್ನವೇ ಆದ ಮೂಡು (Mood) ಗಳಿಲ್ಲ, ಮನಸ್ಥಿತಿಗಳಿಲ್ಲ ಕೀಟ್ಸ್ ಹೇಳುವಂತೆ **ನೆಗೆಟಿವ್ ಕೇಪಬಲಿಟಿಯೇ** (Negative Capability) ನನ್ನ ಮೂಲ ಪ್ರಕೃತಿಯಲ್ಲಿದ್ದಂತಿದೆ. ಅಂತೇ ನಾನು ಕಾದಂಬರಿಕಾರನಾಗಬೇಕು ನನಗೆ ಸ್ವಂತ ವ್ಯಕ್ತಿತ್ವ ಇಲ್ಲದ್ದರಿಂದಲೇ ನಾನು ಬೇರೆ ಬೇರೆ ಪಾತ್ರಗಳ ಮುಖವಾಡ ಧರಿಸಬೇಕು" ಎಂದು ಹೇಳುತ್ತಾನೆ. ಇವನನ್ನು ಮೆಚ್ಚಿರುವ ವಿಧವೆ ರಾಧಿಕಾ ಮತ್ತೊಂದು ವ್ಯಕ್ತಿತ್ವವಾಗಿ ಪುರುಷ ಸಮಾಜದ ಕೈಗೊಂಬೆಯಾಗಿ ಇಡೀ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತಾಳೆ. ಅವಳ ವ್ಯಕ್ತಿತ್ವದ ಒಳದನಿ ಮತ್ತೊಂದು ಮಜಲನ್ನು ಮುಟ್ಟುತ್ತದೆ. ಕಡೆಗೆ ಆಕೆ ಚಿತ್ರನಿರ್ದೇಶಕ ಶೇಖರನಲ್ಲಿ ಅನುರಕ್ತಳಾಗಿ ಗತಿಸಿದ ತನ್ನ ಗಂಡ ರಮೇಶ, ಪ್ರಿಯಕರ ಶ್ರೀಧರ ಈಗ ಶೇಖರ ಹೀಗೆ ಅವಳು

ಆಟದ ಬೊಂಬೆಯಂತೆ ಗಂಡಸರ ಕೈವಶವಾಗಿ ನಂತರ ಶೇಕರನನ್ನು ಬಿಟ್ಟು ಕೊಲ್ಹಾಪುರಕ್ಕೆ ಹೊರಡುತ್ತಾಳೆ. ಕಡೆಗೆ ಶೀತಲಕುಮಾರನಿಗೆ ಅವಳು ಹೋದ ಮೇಲೆ ಅವಳ ಬೆಲೆ ತಿಳಿಯುತ್ತದೆ. ಪ್ರಾರಂಭದಲ್ಲಿ ಅವಳು ದೈಹಿಕವಾಗಿ ಶೀತಲಕುಮಾರ ಮೋಹಿಸಿದರು. ಕಡೆಯಲ್ಲಿ ಅವಳು ಕೊಲ್ಹಾಪುರಕ್ಕೆ ಹೊರಟು ನಿಂತಾಗ "ರಾಧಿಕೆ ಇಲ್ಲದ ಮನೆ ಭಣ ಭಣವೆನಿಸ ತೊಡಗಿತು ನನಗೊಬ್ಬ ಮಗಳಿದ್ದರೆ" ಎನಿಸುತ್ತದೆ. ನವ್ಯ ಸಾಹಿತ್ಯದ ಮನೋ ವೈಜ್ಞಾನಿಕ ಚಿಂತನೆಗಳು ಈ ಕಾದಂಬರಿಯಲ್ಲಿ ಕಾಣಿಸಿಕೊಂಡಿವೆ.

ನಂತರದ **'ಬೀಜ'** ಕಾದಂಬರಿಯ ಕಥಾನಾಯಕ **ಶ್ರೇಯಾಂಸ** ತಂದೆ-ಯೊಂದಿಗೆ ಜಗಳಾಡಿಕೊಂಡು ಬಾಂಬೇಗೆ ಹೋಗಿ ವಾಸವಿರುವ ಶ್ರೇಯಾಂಸ ತಂದೆಯ ಅಂತ್ಯಕ್ರಿಯೆಗೆ ಕೃಷ್ಣಾಪುರಕ್ಕೆ ಬರಬೇಕಾಗುತ್ತದೆ. ತಂದೆಯೇ ಇಲ್ಲದ್ದರಿಂದ ಅವನ ಜಗಳ ಒಂದು ತಾತ್ವಿಕ ಕೊನೆಗೆ ಬಂದು ಮುಗಿದಂತಾಗಿದೆ. ಕೃಷ್ಣಾಪುರಕ್ಕೆ ಬಂದ ಶ್ರೇಯಾಂಸ ತನ್ನ ತಂದೆಯ ಎಲ್ಲಾ ಸಂಬಂಧಗಳೊಡನೆ ಬೆಸೆದುಕೊಳ್ಳುತ್ತ ಬಾಂಬೆಯನ್ನು ಬಿಟ್ಟು ಕೃಷ್ಣಾಪುರಕ್ಕೆ ಬಂದು ನೆಲೆ ನಿಲ್ಲಲೇಬೇಕಾದ ಅನಿವಾರ್ಯಕ್ಕೆ ಸಿಲುಕುತ್ತಾನೆ. ಆತನಿಗೆ ಬಾಂಬೆ ಜೀವನಕ್ಕಿಂತ ಕೃಷ್ಣಾಪುರದ ಜೀವನವೇ ಮುಖ್ಯ ಎಂದೆನಿಸುತ್ತದೆ. ತನ್ನ ಹೆಂಡತಿ ಆೀಝಿಯ ಗಾಢ ಪ್ರೇಮ ಮಗಳಾದ ಕಲ್ಪನಾಳ ಮಮತೆ ಯಾವುದೂ ಮುಖ್ಯವಾಗದೆ ತನ್ನ ಹಳೆಯ ಪ್ರೇಯಸಿ ರೇವತಿ, ಕಲ್ಯಾಣ ಶೆಟ್ಟರು, ವಸಂತನಿರ್ಮಲೆ ಇವರಲ್ಲಿ ತನ್ನ ಸಂಬಂಧದ ಬೇರುಗಳಾಗಿ ಅದರಲ್ಲಿ ಮುಳುಗುತ್ತಾನೆ. ಬೀಜರೂಪದಲ್ಲಿದ್ದ ತನ್ನ ತಂದೆಯ ಸಂಬಂಧ ಮಣ್ಣಿನ ವಾಸನೆ ಎಲ್ಲಾ ಮುಖ್ಯವಾಗಿ ಕೃಷ್ಣಾಪುರದಲ್ಲಿ ಉಳಿಯಲು ಮನಸ್ಸು ಮಾಡುತ್ತಾನೆ. ವಿಕ್ಷೇಪದ ರಾಹುಲನಂತೆ, ಮುಕ್ತಿಯ ಗೌರೀಶನಂತೆ ಸುಖವೆಂಬುದು ಬೇರೆಲ್ಲೂ ಇದೆ ಎಂದೇ ನಂಬಿ ಮುಂಬೈಯಿಂದ ಕೃಷ್ಣಾಪುರ ಎಂಬ ಸಣ್ಣ ಹಳ್ಳಿಯ ಮಣ್ಣಿನಲ್ಲಿ ತನ್ನ ವಂಶವಾಹಿಗಳನ್ನು ಹುಡುಕಲು ಮುಂದಾಗುತ್ತಾನೆ. ತನ್ನ ಅಸ್ಮಿತೆಯನ್ನು ಹುಡುಕುತ್ತಲೆ ಕಡೆಯಲ್ಲಿ ಕೃಷ್ಣಾಪುರದಲ್ಲೇ ಉಳಿಯುತ್ತಾನೆ.

**'ಅಂತರಾಳ'**ದ ವಿಕ್ರಮ ರಾಣೆ ಈ ಕಾದಂಬರಿಯ ನಾಯಕ. ಮೊದಲ ಭಾಗದಲ್ಲಿ ವಿವಾಹದವರೆಗಿನ ಅನುಭವವನ್ನು ದಾಖಲಿಸಿದರೆ, ಎರಡನೆಯದು ಅವನ ವೈವಾಹಿಕ ಜೀವನಕ್ಕೆ ಸಂಬಂಧಿಸಿದೆ. ಕಥಾನಾಯಕನೇ ಹೇಳುವಂತೆ "ನಾನು ನನ್ನ ಅನುಭವಗಳ ಬಗ್ಗೆ ಹೇಳಿದ್ದರಲ್ಲಿ ಸ್ವಲ್ಪ ಸತ್ಯವಿದೆಯೆಂದು ಒಪ್ಪಿಕೊಂಡರೂ, ನಾನು ಇತರರ ಬಗ್ಗೆ ಬರೆದದ್ದರಲ್ಲಿ ವಸ್ತುನಿಷ್ಠ ಸತ್ಯವಿದಯೆ ? ಅಥವಾ ಇತರರು ನನ್ನ ಅನುಭವದ ವಿಶ್ವದಲ್ಲಿಯ ಪಾತ್ರಗಳೇ – ನಾವೇ ನಿರ್ಮಿಸಿದ ಪಾತ್ರಗಳೇ ? ಎಷ್ಟೋ ಸಲ ಇತರರ ಬಗ್ಗೆ ಸಾಕಷ್ಟು ಹೇಳಲು ಬರುವುದಿಲ್ಲ. ಯಾಕೆಂದರೆ ಅವರ ಒಳಗಿನ

ವಿಶ್ವಕ್ಕೆ ನಾನು ಹೊರಗಾದವ" ಎಂಬುದನ್ನು ಹೇಳುತ್ತಲೇ ತಾನು ಮೆಟ್ರಿಕ್ ಕ್ಲಾಸ್‌ನಲ್ಲಿರುವಾಗಲೇ ಗೋವಿಂದನ ತಂಗಿ ಯಶೋಧೆಯನ್ನು (ಬ್ರಾಹ್ಮಣ ಜಾತಿಯ ಹುಡುಗಿ) ಪ್ರೀತಿಸುತ್ತಾನೆ. ಜೊತೆಗೆ ಮನೆಯವರ ವಿರೋಧದ ನಡುವೆ ಮದುವೆ ಮಾಡಿಕೊಳ್ಳುತ್ತಾನೆ. ಇವರ ಅವನ ಆಪ್ತರು ಹಿತೈಷಿಗಳು ಆದ ಪೂಜಾರ ಮಾಸ್ತರ ಒಪ್ಪಿಗೆಯೂ ಸಿಗುತ್ತದೆ. ಮದುವೆಯಾದ ಮೇಲೆ ಕೊಯಿನಾದ ಪ್ರಾಜೆಕ್ಟ್‌ನಲ್ಲಿ ಇಂಜಿನಿಯರ್ ಆಗುತ್ತಾನೆ. ನಂತರ ಮುಂದಾಲೋಚಿಸದೆ ನಿವೃತ್ತಿ ಬರೆದುಕೊಟ್ಟು ಏಕಾಏಕಿ ಕಡಿಮೆ ಬಡ್ಜೆಟ್‌ನ ಮನೆ ಕಟ್ಟಿ ಬಡವರಿಗೆ ಸಹಾಯವಾಗುವಂತೆ ಮಾಡಲು ಮುಂದಾಗುತ್ತಾನೆ. ಆಗ ಅವನಿಗೆ ವಸಂತ – ಅಶ್ವಿನಿಯರ ಪರಿಚಯವಾಗುತ್ತದೆ, ಅಶ್ವಿನಿಯ ದೆಸೆಯಿಂದ ಕುಟುಂಬದಲ್ಲಿ ಬಿಕ್ಕಟ್ಟುಗಳನ್ನು ವಿಕ್ರಮ ಎದುರಿಸ ಬೇಕಾಗುತ್ತದೆ. ಕಡೆಗೆ ಆಕೆ ಭುವನೇಶ್ವರಕ್ಕೆ ಮರಳುವುದರೊಂದಿಗೆ ಇವರ ಸಂಬಂಧ ಕೊನೆಗೊಳ್ಳುತ್ತದೆ. ಇದರ ಜೊತೆಗೆ ಮದುವೆಗೆ ಮುನ್ನ ಸೀತೆ ಎಂಬ ಮನೆ ಕೆಲಸದವಳ ಜೊತೆ ಅಕ್ರಮ ಸಂಬಂಧ ಉಂಟಾಗಿ ಅವಳಿಗೆ ಒಂದು ಮಗುವು ಹುಟ್ಟಿದೆ. ಸಂಪ್ರದಾಯಕ ಎಲ್ಲೆ ಮೀರಿ ಬೆಳೆದ ಈ ಘಟನೆ ನವ್ಯದ ವ್ಯಕ್ತಿ ಪ್ರದರ್ಶನ ಮತ್ತು ಕಾಮುಕತೆಯ ಪ್ರತೀಕದಂತೆ ಕಾಣುತ್ತದೆ. **ಜಿ.ಎಸ್. ಅಮೂರರು** ಹೇಳುವಂತೆ "ವಸಂತನಿಗಾಗಲಿ, ಅಶ್ವಿನಿಗಾಗಲಿ ಯಶೋಧೆ ವಿಕ್ರಮರ ವೈವಾಹಿಕ ಜೀವನವನ್ನು ಹದಗೆಡಿಸುವ ಇಚ್ಛೆ ಇರುವುದಿಲ್ಲ. ಆದರೆ ವಿಕ್ರಮನ ದುಡುಕಿನ ವರ್ತನೆ ಸಮಸ್ಯೆಗಳಿಗೆ ಕಾರಣವಾಗುತ್ತದೆ. ಹಜೋರ್ಗನಂತೆ ವಿಕ್ರಮ ಕೂಡ ಒಬ್ಬ ತಿದ್ದಲಾಗದ ರೊಮ್ಯಾಂಟಿಕ್, ಇದೇ ಅವನ ಅಸ್ಮಿತೆ ಹಾಗೂ ದುರಂತ. ಇದನ್ನು ಅವನು ಅರ್ಥ ಮಾಡಿಕೊಳ್ಳದಿರುವುದಕ್ಕೆ ಕಾರಣ ಅವನ ಸೈಕಿಯಾಟ್ರಿಸ್ಟ್ ಹೇಳವಂತೆ ಅವನ ಅಪಕ್ವತೆ."

**ಓಂ ಣಮೋ** ಕಾದಂಬರಿ ಶಾಂತಿನಾಥ ದೇಸಾಯಿ ಅವನ ಕಟ್ಟಕಡೆಯ ಕಾದಂಬರಿ ಮುಕ್ತಿಯಲ್ಲಿ ಪ್ರಾರಂಭವಾದ ಅವರ ಬರವಣಿಗೆಯ ಅಭಿಯಾನ 'ಓಂಣಮೋ' ಗೆ ಬಂದು ನಿಂತಿದೆ. ಇವರ ಮುಖ್ಯ ಪಾತ್ರ ಆ್ಯಡಂ ದೇಸಾಯಿ ಮುಕ್ತಿಯ ಗೌರೀಶನ ಎಲ್ಲಾ ಸಂದಿಗ್ಧ ಸಮಸ್ಯೆಗಳಾಗಲಿ, ಅವನ ಗೊಂದಲಗಳಾಗಲಿ, ಅಥವಾ ಪಲಾಯನವಾದಗಳಾಗಲಿ ಆ್ಯಡಂ ದೇಸಾಯಿಗಿಲ್ಲ, ಆ್ಯಡಂ ದೇಸಾಯಿಯಲ್ಲಿ ಬೆಳೆದಂತ ಮತ್ತು ಎಲ್ಲವನ್ನು ಸರಿದೂಗಿಸಿ ಹೊಂದಿಕೊಂಡು ಹೋಗುವ ಅತ್ಯಂತ ಶುದ್ಧಗುಣವಿದೆ. ಪ್ರಾರಂಭದಲ್ಲಿ ಕೇವಲ ಸ್ನೇಹಿತರಾಗಿದ್ದ **ಆ್ಯಡಂ ಮತ್ತು ಆ್ಯನ್ ಈಗಲ್ಟನ್** ಕಾದಂಬರಿಯ ಕಡೆಯಲ್ಲಿ ಮದುವೆಯಾಗಲು ಒಪ್ಪುವುದರೊಂದಿಗೆ ಕಾದಂಬರಿ ಕೊನೆಯಾಗುತ್ತದೆ. ಆದರೆ ಕಾದಂಬರಿಯಲ್ಲಿರುವ ಅಪ್ಪಾ ಸಾಹೇಬ ಮತ್ತು ಸೋನುಬಾಯಿಯವರ ಅಕ್ರಮ ಸಂಬಂಧ ಆ್ಯಡಂಗೆ ಕೆಟ್ಟದಾಗಿ ಕಂಡುಬರುವುದಿಲ್ಲ

ಅಂದರೆ ಅಪ್ಪಾಸಾಹೇಬನ ನಂತರದ ಪೀಳಿಗೆಯವನಾದ ಆ್ಯಡಂ ಅಪ್ಪಾಸಾಹೇಬನ ಅಕ್ರಮ ಸಂಬಂಧವನ್ನು ಒಪ್ಪಿಕೊಳ್ಳುತ್ತಾನೆ, ಅಷ್ಟೇ ಅಲ್ಲದೆ ಆ್ಯನ್ ಕೂಡ 'ಜೈನ ಧರ್ಮ'ದ ಅಧ್ಯಯನಕ್ಕಾಗಿ ಬಂದವಳು ಅದರ ಅಧ್ಯಯನದಲ್ಲೇ ಮುಳುಗುತ್ತ, ಎಲ್ಲಾ ಸಂಪ್ರಾದಾಯಕತೆಯನ್ನು ಅಳವಡಿಸಿಕೊಳ್ಳುತ್ತ ಜೈನಳೇ ಆಗಿ ಪರಿವರ್ತನೆಗೊಳ್ಳುತ್ತಾಳೆ. ವಿದೇಶೀಯಳಾದ ಆ್ಯನ್ ವಿದೇಶಿ ಸಂಸ್ಕೃತಿಗೆ ಅಭಿಮುಖಳಾಗಿ ಈಜಿ ಭಾರತ ಸಂಸ್ಕೃತಿಯ ದಡ ಸೇರುತ್ತಾಳೆ. ಆದರೆ ಕಾದಂಬರಿಯ ಕಡೆಯಲ್ಲಿ ಆ್ಯಡಂ ಜೊತೆ ವಿವಾಹವಾಗುವ ಮಾತನಾಡುತ್ತಾ ಮುಂದಿನ ಭಾರಿ ಭಾರತಕ್ಕೆ ಬಂದರೆ 'ಬೌದ್ಧ ಧರ್ಮ'ದ ಬಗ್ಗ ಅಧ್ಯಯನ ಕೈಗೊಳ್ಳಬೇಕೆಂದು ಹೇಳುತ್ತಾಳೆ. ಅಂದರೆ ಆ್ಯನ್ ಒಬ್ಬ ಪ್ರಬಲ ಈಜುಗಾರ್ತಿ. ಸಂಸ್ಕೃತಿಗಳ ವಾಹಿನಿಗಳಲ್ಲಿ ಈಜುತ್ತಲೆ ಎಲ್ಲವನ್ನು ಕಲಿಯುತ್ತಲೇ ಮುಂದುವರಿಯುತ್ತಾಳೆ. ಇವೆಲ್ಲ ಘಟನೆಗಳು 'ನವ್ಯ'ರ 'ಚಲನಶೀಲ' ವಸ್ತುಸ್ಥಿತಿಯನ್ನು ಪ್ರತಿಪಾದಿಸುತ್ತವೆ.

ನವ್ಯ ಕಾಲಘಟ್ಟದಲ್ಲಿ ದೇಸಾಯಿಯವರು ಮಹಿಳಾ ಚಿಂತನೆಗೆ ಹೆಚ್ಚು ಆಧ್ಯತೆ ಕೊಟ್ಟಿದ್ದು ಅವರ ಎಲ್ಲಾ ಕಾದಂಬರಿಗಳಲ್ಲಿ ಕಂಡುಬರುವ ಅಂಶವಾಗಿದೆ. ದೇಸಾಯಿಯವರು ಹೆಣ್ಣಿಗೆ ನೀಡುವ ವಿಶೇಷ ಸ್ಥಾನವು ಇತರ ಕಾದಂಬರಿಕಾರರಿಗಿಂತ ಭಿನ್ನವಾಗಿ ಇವರ ಕಾದಂಬರಿಗಳಲ್ಲಿ ಕಂಡುಬರುತ್ತದೆ. ಇದು ಅವರಿಗೆ ಅನಾಯಾಸವಾಗಿ ಸಿಧ್ಧಿಸಿದ ಕಲೆ. ಹೆಣ್ಣಿಗೆ ನೀಡುವ ಹಕ್ಕು ಮತ್ತು ಸ್ವತಂತ್ರ ಇವೆರಡೂ ಇವರ ಕಾದಂಬರಿಗಳಲ್ಲಿ ಎದ್ದು ಕಾಣುತ್ತದೆ. ಬಹುಶ: ಆಧುನಿಕ ಪರಿಸರದಲ್ಲಿ ಬೆಳದುದರಿಂದ ದೇಸಾಯಿ ಪೂರ್ಣ ಸ್ವಾತಂತ್ರ್ಯವನ್ನು ಅವರ ಸ್ತ್ರೀಯರು ಪಡೆಯಲು ಪ್ರಯತ್ನಿಸುತ್ತಾರೆ

**ಅಡಿ ಟಿಪ್ಪಣಿ**

(1) ಸಾಹಿತ್ಯ ಸಂಪರ್ಕ: ಟಿ.ಪಿ. ಅಶೋಕ ಪುಟ 33, 34

(2) ಅರ್ಥಲೋಕ: ಜಿ.ಎಸ್. ಅಮೂರ – ಪುಟ 11.

## ಅಧ್ಯಾಯ 4 : ಅಸ್ತಿತ್ವವಾದ ಮತ್ತು ಶಾಂತಿನಾಥ ದೇಸಾಯಿ

ಶಾಂತಿನಾಥ ದೇಸಾಯಿ ಅವರು ತಮ್ಮ ಕಾದಂಬರಿಗಳ ಮೂಲಕ ಅಸ್ತಿತ್ವವಾದವನ್ನು ಪ್ರಮುಖವಾಗಿ ಪ್ರತಿಪಾದಿಸುತ್ತಾರೆ. ಅವರ ಎಲ್ಲ ಕಾದಂಬರಿಗಳಲ್ಲೂ ಅಸ್ತಿತ್ವವಾದದ ಛಾಪು ಒಡಮೂಡಿದೆ. **'ನವ್ಯ ಸಾಹಿತ್ಯ ದರ್ಶನ'**ದಲ್ಲಿ ಅವರೇ ಅದನ್ನು ಹೀಗೆ ಪ್ರತಿಪಾದಿಸುತ್ತಾರೆ. "ನನ್ನದು ಮಾರ್ಕ್ಸ್ ಪ್ರಭಾವಿತವಾದ ಅಸ್ತಿತ್ವವಾದೀ ಮಾನವತಾವಾದ... ನಾನು ಮಾರ್ಕ್ಸ್‌ವಾದವನ್ನು ಸ್ವಲ್ಪ ಇಟ್ಟುಕೊಂಡು ನವ ಮಾನವತಾವಾದವನ್ನು ಸ್ವೀಕರಿಸಿ ನನ್ನದೇ ಆದ ನನ್ನ ಸಂವೇದನೆಯ ಕೇಂದ್ರ ಪ್ರವೃತ್ತಿಯಾದ, ಅಸ್ತಿತ್ವವಾದವನ್ನು ಬಿಡದೆ ಜೀವನವನ್ನು ಅನುಭವಿಸುವ ದೃಷ್ಟಿಕೋನವನ್ನು ಬೆಳೆಸಿಕೊಂಡಿದ್ದೇನೆ. ನನ್ನ ಕಾದಂಬರಿಗಳ ಹಿಂದಿನ ಮೂಲ ಪ್ರೇರಣೆ ನನ್ನ ಈ ದೃಷ್ಟಿಕೋನ... ನನ್ನ ಸಾಹಿತ್ಯ ವಿಮರ್ಶೆಯ ಮಾನದಂಡಗಳೂ ಈ ದೃಷ್ಟಿಕೋನದಿಂದಲೇ ಪ್ರೇರಿತವಾದವುಗಳು".

ಒಂದು ಸಮಾಜದ ಮೌಲ್ಯಗಳನ್ನು ಒಪ್ಪದೆ ಯಾಂತ್ರಿಕ ಬದುಕಿನಿಂದ ಮುಕ್ತರಾಗಬೇಕೆನ್ನುವ ಭ್ರಮೆಯನ್ನು ಕಟ್ಟಿಕೊಳ್ಳುವ ಪಲಾಯನವಾದಿಗಳನ್ನು ಶಾಂತನಾಥ ದೇಸಾಯಿ ಅವರು ತಮ್ಮ ಕಾದಂಬರಿಗಳ ಬಹುಪಾಲು ನಾಯಕರಲ್ಲಿ ಚಿತ್ರಿಸಿದ್ದಾರೆ. ಬದುಕಿನ ಸಂಕುಚಿತತೆಯಿಂದ ತಪ್ಪಿಸಿಕೊಳ್ಳುವುದೆಂದರೆ, ಬದುಕಿನಿಂದ ಓಡಿ ಹೋಗುವುದೆಂದು ದೇಸಾಯಿಯವರ ನಾಯಕರು ತಿಳಿಯುತ್ತಾರೆ. ಅನಾಥಪ್ರಜ್ಞೆಗಳಿಂದ ನರಳುವ ದೇಸಾಯಿ ಅವರ ನಾಯಕರು ಆ ಮೌಲ್ಯಗಳನ್ನೇ ವ್ಯಕ್ತಿ ವಿಶೇಷಗಳೆಂದು ನಂಬಿ ಮುನ್ನಡೆಯುವುದರಿಂದ ಇತರರಿಗಿಂತ ತಾವು ಭಿನ್ನ, ಶ್ರೇಷ್ಠರೆಂದೇ ತಿಳಿಯುತ್ತಾರೆ. ದೊಡ್ಡ ಬದುಕಿನ ಪರಿಸರದಲ್ಲಿ ಬೇರು ಬಿಡಲಾಗದೆ ಅಸಮರ್ಥರಾಗಿ ಬದುಕಿಗೆ ಅಭಿಮುಖವಾಗಿ ಚಲಿಸುತ್ತಾ ಅಲ್ಲಿಂದ ಪಲಾಯನವಾದಿಗಳಂತೆ ಕಾದಂಬರಿಯಲ್ಲಿ ಕಾಣಿಸುತ್ತಾರೆ. ಈ ನಾಯಕರ ಬಾಲಿಶತನ, ಅರೆಬೆಂದ ಆಲೋಚನೆಗಳು, ತೊಳಲಾಟ, ವಂಚನೆ, ಅಸ್ತಿತ್ವವಾದ, ಅಸಂಗತವಾದಗಳನ್ನು ಎತ್ತಿ ತೋರಿಸುತ್ತಾರೆ. **'ಮುಕ್ತಿ'ಯ ಗೌರೀಶ, ವಿಕ್ಷೇಪದ ರಾಹುಲ', 'ಸೃಷ್ಟಿ'ಯ ದೇವಧರ್, 'ಬೀಜ'ದ ಶ್ರೇಯಾಂಸ, 'ಸಂಬಂಧ'ದ ರಾಧಿಕಾ, 'ಅಂತರಾಳ'ದ ವಿಕ್ರಮರಾಣೆ** ಇವರೆಲ್ಲರಲ್ಲಿ ಇದನ್ನು ಕಾಣಬಹುದು. ಕಾದಂಬರಿಕಾರರು ತಮ್ಮ ಕಾದಂಬರಿಯ ನಾಯಕರಲ್ಲಿ ಈ ತರಹದ ಒಂದು ಸ್ಥಿತಿ ಇಪ್ಪತ್ತನೆಯ ಶತಮಾನದ ಅನೇಕ ಪ್ರಮುಖ ಬರಹಗಾರರು ಈ ಸಮಸ್ಯೆಗಳನ್ನು ಆಳವಾಗಿ ಪರಿಶೀಲಿಸಿದ್ದಾರೆ. **ಕಾಮು, ಸಾರ್ತ್, ಎಲಿಯಟ್, ಸಾಲ್‌ಬೆಲ್ಲೋ** ಮುಂತಾದ ಪಾಶ್ಚಿಮಾತ್ಯ ಬರಹಗಾರರ ಅನೇಕ ಕೃತಿಗಳಲ್ಲಿ ಈ ಪರಿಶೀಲನೆಯನ್ನು

ಗಮನಿಸಬಹುದು. ಈ 'ನಾಯಕರು' ಕೂಡ ಈ ಸಮಸ್ಯೆಗೆ ಒಳಗಾಗಿರುವುದು ಅವರ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಅನಿವಾರ್ಯತೆಯಿಂದ ಬೆಳೆದು ಬಂದವುಗಳಾದ್ದರಿಂದ ಸಹಜವೆನಿಸುತ್ತವೆ. ದೇಸಾಯಿ ಅವರ ನಾಯಕರ ಸಮಸ್ಯೆಗಳು ಇಂಥ ಸಾಮಾಜಿಕ ಇಲ್ಲವೆ ವೈಯಕ್ತಿಕ ಅನುಭವಗಳ ಹಿನ್ನೆಲೆಯಲ್ಲಿ ಮೂಡಿ ಬರುತ್ತವೆ.

**ಮುಕ್ತಿ** ಕಾದಂಬರಿಯು **ಗೌರೀಶ**ನ ಒಂದು ಆತ್ಮಕತೆ ಇಲ್ಲಿ ಗೌರೀಶ ತನ್ನ ಜೊತೆಗೆ ಹಬ್ಬಿರುವ ಎಲ್ಲಾ ಸಂಬಂಧಗಳು ಬಂಧನದಂತೆ ಭಾಸವಾಗಿ ಆತ **ನೈರೋಬಿ**ಗೆ ಹೊರಡುವ ಚಿಂತನೆಯಲ್ಲಿ, ತೊಳಲಾಟದಲ್ಲಿ ಇದ್ದಾನೆ. ದೇಸಾಯಿ ಅವರ ಕಾದಂಬರಿಗಳು ಕ್ಷಣದಿಂದ ಕ್ಷಣಕ್ಕೆ ಬಣ್ಣ ಬದಲಾಯಿಸುವ ಬೇಜವಾಬ್ದಾರಿ ವ್ಯಕ್ತಿಗಳ ದುರ್ಬಲ ಭಾವನೆಗಳಷ್ಟನ್ನೇ ಹಿಡಿದಿಡುತ್ತ ಹೋಗುತ್ತವೆ. ಆದ್ದರಿಂದಲೇ 'ಮುಕ್ತಿಯ ಗೌರೀಶ ಮನೋದುರ್ಬಲನಂತೆ ಕಾಣಿಸಿಕೊಂಡು ಇತ್ತ ಕಾಮಿನಿಯನ್ನು ಬಿಡಲಾರದೆ ಅತ್ತ ಡಾಲಿಯನ್ನು ಪೂರ್ಣ ನಂಬಲಾಗದ ಸ್ಥಿತಿಗೆ ತಲುಪುತ್ತಾನೆ.

"ಆಗ ಪ್ರೇಮ ಭಂಗದ ದು:ಖದ ಭಾರ ಹೊತ್ತು ಓಡಿ ಬಂದಿದ್ದೆ. ಪ್ರೇಮ ಭಂಗವಲ್ಲವದು ! ಪ್ರೇಮದ ಅಸಾಫಲ್ಯತೆ ಮಾತ್ರ ಅಥವಾ ಅದಕ್ಕೆ ಏನೆನ್ನಬೇಕೋ ನನಗೆ ತಿಳಿಯದು... ದು:ಖಾಂತ ನಾಟಕದ ನಾಯಕನಂತೆ ವರ್ತಿಸುತ್ತಿದ್ದ ಕಾಲವದು. ನನ್ನ ದು:ಖವೆಂದರೆ ಅಗಾಧವಾದದ್ದು ಅದ್ವಿತೀಯವಾದದ್ದು ಎಂಬ ಕಲ್ಪನೆ ಆಗ" (1)

ಈಗ "ನಿಜವಾಗಿ ನೋಡಿದರೆ ಒಂದು ದೃಷ್ಟಿಯಿಂದ ನಾನು ಓಡಿ ಹೋಗುತ್ತಿರುವೆ ಇದು ಎಷ್ಟು ಜನರಿಗೆ ಗೊತ್ತು ? ಸತ್ಯೇಂದ್ರನಿಗೆ ಸ್ವಲ್ಪ ಕಲ್ಪನೆ ಇರಬಹುದು. ಅದೂ ಅಸ್ಪಷ್ಟವಾಗಿ... ಹೂಂ ಯಾರಿಗೆ ಗೊತ್ತಾಗಿ ಏನಾಗುವುದಿದೆ ? ನನಗೆ ದೂರ ಅತಿ ದೂರ ಹೋಗಬೇಕಾಗಿದೆ. ನನ್ನ ಗತ ಜೀವನದ ಸಂಪರ್ಕವಿಲ್ಲದಲ್ಲಿ ಹೋಗಬೇಕಾಗಿದೆ. ಯಾವ ಸ್ಥಾನದಲ್ಲಿ ಜೀವನಕ್ಕೆ ಹೊಸತಾಗಿ ಅನಾಸಕ್ತಿಯಿಂದ ಇರಲು ಶಕ್ಯವೋ ಅಂಥಲ್ಲ ಹೋಗಬೇಕಾಗಿದೆ. ದೂರ ಪರದೇಶದಲ್ಲಿ ಯಾರ ಬಂಧನಕ್ಕೂ ಒಳಗಾಗದೆ ಶುದ್ಧ ಅಪರಿಚಿತನಂತೆ ನಿರ್ವಿಕಾರವಾಗಿ ಬದುಕಲು ಹೋಗಬೇಕಾಗಿದೆ..." (2)

"ಆದರೆ ಇಲ್ಲಿಯೇ ಇದ್ದು ಎದುರಿಸಿ, ಅರಗಿಸಿ ಜಯಿಸಿ ಜೀವಿಸುವುದು ನನ್ನಿಂದ ಸಾಧ್ಯವಿಲ್ಲ_ ಇಂಥ ಮಾತು ನೆಲೆಸಿದ ನಿಶ್ಚಿತರಾದ ಮನಗಳಿಗೆ ಸಾಧ್ಯ ! ನನ್ನದು ಹರಿದಾಡುವ ಚಂಚಲ ಮನಸ್ಸು" (3)

"ಅಯ್ಯೋ ನಾನು ಓಡಿ ಹೋಗಬೇಕು, ನನ್ನನ್ನು ನಾನು ರಕ್ಷಿಸಲು ಎಲ್ಲಿಯಾದರು ದೂರ ದೂರ ಓಡಿ ಹೋಗಬೇಕು, ಸದಾ ಓಡುತ್ತಲೆ ಇರಬೇಕು. ಆದುದರಿಂದ ಆಫ್ರಿಕೆಗೆ ನಾನು ಓಡಿ ಹೋಗುತ್ತಿರುವೆ'ನೆಂದೇ ನನ್ನ ಭಾವನೆ ! ಅಲ್ಲ ಆ ಅಜ್ಞಾತ ಆಫ್ರಿಕೆಯಲ್ಲಿ ನನ್ನ ಮುಕ್ತಿ ನನ್ನನ್ನು ಕಾದಿದೆ ಎಂಬ ಇನ್ನೊಂದು ಭಾವನೆ ನನ್ನಲ್ಲಿ ಬಲವಾಗಿದೆ"(4)

ಮೇಲಿನ ಗೌರೀಶನ ವಿಕ್ಷಿಪ್ತತೆ ಮತ್ತು ಪಲಾಯನವಾದ ಅಸ್ತಿತ್ವವಾದದ ಬಲವಾದ ಕುರುಹುಗಳಾಗಿವೆ. ಆತ ಇಲ್ಲೂ ಇರಲಾರದೆ ಅಲ್ಲಿಗೂ ಹೋಗಲಾರದೆ ಇಲ್ಲಿಯೂ ಸಲ್ಲಲು ಸಾಧ್ಯವಾಗದೆ ಅಲ್ಲಿ ಸಲ್ಲುವ ನಂಬಿಕೆಯಿಂದ ತನ್ನ ಅಸ್ಮಿತೆ ಮತ್ತು ಅಸ್ತಿತ್ವಗಳೆರಡನ್ನು ಹುಡುಕಾಡುತ್ತಲೇ ತೊಳಲಾಡುತ್ತಾನೆ. ಕಡೆಗೆ ಆತ ಡಾಲಿಯೊಂದಿಗೆ ಆಫ್ರಿಕೆಗೆ ಹೋಗಲು ಸಿದ್ಧನಾಗುವುದರೊಂದಿಗೆ ಕಾದಂಬರಿ ಮುಗಿದರೂ ಗೌರೀಶನೊಂದಿಗೆ ಸಂಬಂಧ ಬೆಸೆದಿರುವ ಬೇರೆ ಪಾತ್ರಗಳೂ ಕೂಡ ಅಸ್ತಿತ್ವದ ಹುಡುಕಾಟದಲ್ಲೆ ಮುಂದುವರಿಯುತ್ತವೆ.

ಗೌರೀಶನ ಪ್ರಥಮ ಪ್ರೇಯಸಿ ಕಾಮಿನಿಯದು ಇನ್ನೊಂದು ಗುಣ. ಆಕೆ ಗಂಡಸರ ಕೈಗೆ ಸಿಕ್ಕ ಆಟದ ಬೊಂಬೆಯಂತೆ ಕಾಣುತ್ತಾಳೆ. ಒಮ್ಮೆ ಗೌರೀಶನ ಕಡೆಗೆ ಮತ್ತೊಮ್ಮೆ ಕಾಮ್ರೇಡ್ ಗಾಂಗಲರ ಕಡೆಗೆ, ಶ್ರೀಕಾಂತ ರೋಗಿಷ್ಟನಾಗಿ ಇದ್ದಾಗಲೂ ಕಾಮಿನಿ ಅದರ ಬಗ್ಗೆ ಹೆಚ್ಚು ಕಾಳಜಿ ವಹಿಸಿಲ್ಲ. ಅವಳದು ಕೂಡ ಅಸ್ತಿತ್ವದ ಹುಡುಕಾಟವಾಗಿ ಒಮ್ಮೆ ಗೌರೀಶನ ಕಡೆಗೆ ಒಲಿದರೆ ಮತ್ತೊಮ್ಮೆ ಗಾಂಗಲರ ಬಗ್ಗೆ ಅಭಿಮಾನ. ಇಲ್ಲಿ ಅವಳಿಗೆ ಸ್ವಯಂಭೂ ಎಂಬ ಮನಸ್ಥಿತಿ, ಇಲ್ಲ ಆಕೆ ಗರ್ಭವತಿಯಾಗಿ ಅಬಾರ್ಷನ್ ಮಾಡಿಸಿಕೊಂಡ ಮೇಲೆ ಪರಿತ್ಯಕ್ತಳಾಗಿ ಗೌರೀಶನನ್ನು ವಿವಾಹವಾಗುವಂತೆ ಕೇಳಿಕೊಳ್ಳುತ್ತಾಳೆ. ಆದರೆ ಗೌರೀಶ ಡಾಲಿಯೊಂದಿಗೆ ನೈರೋಬಿಗೆ ಹೋಗಲು ಸಿದ್ಧನಾಗಿರುತ್ತಾನೆ. ಹಡಗಿಗೆ ಎರಡು ಟಿಕೆಟ್‌ಗಳನ್ನು ಮುಂಗಡ ಕಾಯ್ದಿರಿಸಿ ಆತ ಡಾಲಿಯೊಂದಿಗೆ ಹೊರಡುತ್ತಾನೆ.

ಆದರೆ ಕಾಮಿನಿ ಪುರುಷ ಪ್ರಧಾನ ಸಮಾಜದ ಕೈಗೊಂಬೆಯಾಗಿಯೇ ನಿಲ್ಲುತ್ತಾಳೆ. ಇನ್ನು ಡಾಲಿಯ ಬಗ್ಗೆ ಹೇಳುವುದಾದರೆ ಅವಳೊಬ್ಬ ಅಪ್ಪಟ ಗೃಹಿಣಿಯಂತೆ ಪರಿಪೂರ್ಣ ಹೆಣ್ಣಂತೆ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತಾಳೆ. ಧರ್ಮದಿಂದ ಕ್ರಿಶ್ಚಿಯನ್ ಆದ ಡಾಲಿ ತನ್ನ ತಾಯಿಗೆ ಸುಳ್ಳು ಹೇಳಿ ಗೌರೀಶನೊಂದಿಗೆ ಇರಲು ಬರುತ್ತಾಳೆ. ಗೌರೀಶ ಡಾಲಿಯರಿಬ್ಬರು ಮಾತನಾಡುವ ಒಂದು ಸಂದರ್ಭದಲ್ಲಿ ತನಗೊಂದು ಮಗು ಬೇಕೆಂದು ಡಾಲಿ ಅಪೇಕ್ಷಿಸುತ್ತಾಳೆ. ಆದರೆ ಇದರಿಂದ ಗೌರೀಶನಿಗೆ ಭಯವಾಗುತ್ತದೆ. ಮದುವೆಗೆ ಮುನ್ನವೇ ಮಗುವೇ ? ಎಂದು

ಪ್ರಶ್ನಿಸುತ್ತಾನೆ. ಅದಕ್ಕೆ ಡಾಲಿ ಮದುವೆಯ ವಿಷಯವನ್ನು ನಾನು ಎಂದೋ ಮರೆತಿದ್ದೇನೆ ಎಂದು ಹೇಳುತ್ತಾಳೆ. ಅಂದರೆ ಅವಳೂ ಕೂಡ ಒಂದು ಪುಟ್ಟ ನದಿಯಾಗಿ ಎಲ್ಲೆಲ್ಲೋ ಹರಿದು ಕಡೆಗೆ ಮಾನವ ಸಮಾಜದ ಸಂಬಂಧವನ್ನು ಬೆಳೆಸುವ ಉತ್ಕಟತೆ ಮತ್ತು ಅಸ್ತಿತ್ವಗಳೆರಡೂ ಕಾಣಿಸಿಕೊಳ್ಳುತ್ತವೆ. ಕೊನೆಗೆ ಗೌರೀಶನೊಂದಿಗಿನ ಸಂಬಂಧ ಮದುವೆಯಾಗುವ ಇಂಗಿತದ ಮೂಲಕ ಕೊನೆಗೊಳ್ಳುತ್ತದೆ.

'ವಿಕ್ಷೇಪ'ದ ರಾಹುಲನೂ ಕೂಡ ಅಸ್ತಿತ್ವದ ಹುಡುಕಾಟದಲ್ಲೆ ತನ್ನತನದ ಹುಡುಕಾಟ ಎಂದು ತಪ್ಪಾಗಿ ಭ್ರಮಿಸುವ 'ಜಿಪ್ಸಿ'ಯಂತೆ ಕಾಣಿಸಿಕೊಳ್ಳುತ್ತಾನೆ. ಕಾದಂಬರಿಯ ಪ್ರಾರಂಭದಲ್ಲಿ ಮಾಧವಿಯನ್ನು ಪ್ರೀತಿಸಿ ಮದುವೆಗೆ ಮುನ್ನ ಅವಳನ್ನು ಕೂಡಲು ಬಯಸುತ್ತಾನೆ. ಆದರೆ ಆಕೆ ಹಲವಾರು ಕಾರಣಗಳನ್ನೊಡ್ಡಿ ಮದುವೆಗೆ ಮುನ್ನ ಸಹಕರಿಸದ ಕಾರಣ ಅವನು ಅವಳನ್ನು ತ್ಯಜಿಸುತ್ತಾನೆ. ಈ ಸಂದರ್ಭದಲ್ಲಿ ಅರವಿಂದ ಆತನ ಸಹಾಯಕ್ಕೆ ಬರುತ್ತಾನೆ. ಆದರೆ ಅರವಿಂದ ಪ್ರೀತಿಸುವ ವೈದೇಹಿಯ ವ್ಯಕ್ತಿತ್ವಕ್ಕೆ ಮಾರು ಹೋದ ರಾಹುಲ ಅವರಿಬ್ಬರಲ್ಲಿ ಒಡಕು ಮೂಡಿಸಲು ಪ್ರಯತ್ನಿಸುತ್ತಾನೆ. ಆದರೆ ಅದು ಸಾಧ್ಯವಾಗದಾಗುತ್ತದೆ. ಮಾಧವಿಯ ಪ್ರೀತಿ ಕಾಮಗಳ ಒತ್ತಡದಲ್ಲಿ ಮಾಂಶಿಯವರ ಯೋಜನೆಯ ಬಲೆಗೆ ಬಿದ್ದ ರಾಹುಲ್ ಕುಂದಾಳನ್ನು ವರಿಸುತ್ತಾನೆ. ಮಾಂಶಿಯವರ ಯೋಜನೆ ತಿಳಿದಾಗ ಇನ್ನೂ ಹೆಚ್ಚಾದ ಅಸಹನೆ ಅವನಲ್ಲಿ ಮಡುಗಟ್ಟುತ್ತದೆ. ಕಡೆಗೆ ಅವನೇ ಹೇಳುವಂತೆ "ಒಮ್ಮೆ ವಿಮಾನದಲ್ಲಿ ಕುಳಿತರೆ ಸಾಕು ಎಂದೆನಿಸಿಬಿಟ್ಟಿದೆ. ಈ ಎಲ್ಲ ಗಲಾಟೆಯಿಂದ ಎಲ್ಲ ಬಂಧನಗಳಿಂದ – ಮುಕ್ತಿ ಪಡೆಯುವ ಆ ಕ್ಷಣಕ್ಕಾಗಿ – ವಿಮಾನ ಆಕಾಶದಲ್ಲಿ ವಿಕ್ಷೇಪಗೊಳ್ಳುವ ಆ ಕ್ಷಣಕ್ಕಾಗಿ ರಾಹುಲನ ಜೀವನ ಕಾತರಿಸಿ ನಿಂತಿದೆ. ಸಿದ್ಧತೆಯಲ್ಲಿ ಮುಗಿದಿದೆ ಇನು ಬರೇ ನಿರೀಕ್ಷೆ" (5)

ಈ ತೊಳಲಾಟದಲ್ಲೆ ಕುಂದಾಗೆ ಆತ ಹೀಗೆ ಹೇಳುತ್ತಾನೆ "ನಾನು ನಿಜವಾಗಿ ಯಾರು ಗೊತ್ತೇ ? ಜಿಪ್ಸಿ – ಊರಿಂದ ಊರಿಗೆ, ದೇಶದಿಂದ ದೇಶಕ್ಕೆ, ಸಂಸ್ಕೃತಿಯಿಂದ ಸಂಸ್ಕೃತಿಗೆ, ಹೆಣ್ಣಿನಿಂದ ಹೆಣ್ಣಿಗೆ ತಿರುಗುವ ಜಿಪ್ಸಿ ನಾನು ನನಗೆ ಬೇರೆಂಬುದಿಲ್ಲ ನೋಡು – ಅದಕ್ಕೆ ಹೃದಯವೂ ಇಲ್ಲ–ನನಗೆ ತಳವಿಲ್ಲ ಬುಡವಿಲ್ಲ" (6)

"ನಿಜವಾಗಿ ನೋಡಿದರೆ ನಮ್ಮ ಸಂಬಂಧ ವರ್ತುಲದಲ್ಲಿಯೇ ನಾನೂ–ನೀನೂ ಕೂಡಿಯೇ ಹಾಳಾಗುತ್ತ ನಡೆದಿದ್ದೇವೆ ಅಸಹ್ಯವೆಂದೆನಿಸಿದರೂ ನಾವು ಒಬ್ಬರನ್ನೊಬ್ಬರು ಅಗಲುವುದು ಲೇಸು – ನನಗೂ ಏನನ್ನೋ ಅರಸಬೇಕಿದೆ ನನ್ನ ರೀತಿಯಲ್ಲೇ ನನ್ನ ವ್ಯಕ್ತಿತ್ವದ ನಿಯಮದ ಪ್ರಕಾರ ನನ್ನತನ ಶೋಧಿಸಬೇಕಾಗಿದೆ.

ಅದಕ್ಕಾಗಿಯೇ–ನಾನು ಹೋಗುತ್ತಿರುವೆ..."[7] ಇಲ್ಲಿ ಇರಲಾಗದ ಚಂಚಲ ಮನಸ್ಥಿತಿಯಿಂದ ಬೇರೆಲ್ಲೋ ಹೋಗಿ ಮುಕ್ತಿ ಪಡೆಯಬೇಕೆನ್ನುವ ರಾಹುಲನ ಅಸ್ತಿತ್ವದ ಪ್ರಶ್ನೆ ಮತ್ತೆ ಎದ್ದು ನಿಲ್ಲುತ್ತದೆ. ಈ ಅಸ್ತಿತ್ವದ ಪ್ರಶ್ನೆಯೂ ಒಂದು ಮಿತಿಯ ಸರಹದ್ದಿನಲ್ಲಿ ಗಿರಕಿ ಹೊಡೆದು ಆ ಸರಹದ್ದನ್ನು ಮೀರಲಾರದೆ ಅಥವಾ ಆ ಸರಹದ್ದಿನೊಳಗೆ ಉಳಿಯಲೂ ಆಗದೆ ಕಡೆಗೆ ಅದನ್ನು ಮೀರಿ ಇಂಗ್ಲೆಂಡಿಗೆ ಹೊರಡುವುದರೊಂದಿಗೆ ಕಾದಂಬರಿ ಮುಗಿಯುತ್ತದೆ.

'ಸೃಷ್ಟಿ' ಕಾದಂಬರಿಯ ಪ್ರಮುಖ ಪಾತ್ರಗಳು ಕಾದಂಬರಿ ಬರೆಯುವ ಲೇಖಕ ಅದನ್ನು ಓದುವ ಓದುಗ ಹಾಗೂ ಸುರೇಶ, ದೇವಧರ ಮತ್ತು ಶಕುಂತಲೆ. ಸೃಷ್ಟಿಯಲ್ಲಿ ಎರಡು ಭಾಗಗಳವೆ. ಮೊದಲನೆ ಭಾಗದಲ್ಲಿ ಕಾದಂಬರಿಕಾರ ಓದುಗನ ಸಹಕಾರದೊಂದಿಗೆ ಸುರೇಶ, ದೇವಧರ, ಶಕುಂತಲೆ ಈ ಪ್ರಮುಖ ಪಾತ್ರಗಳನ್ನು ಸೃಷ್ಟಿಸಿ ಅವುಗಳಿಗೆ ಬೇರೆ ಬೇರೆ ಸಾಧ್ಯತೆಗಳನ್ನು ಕಲ್ಪಿಸುತ್ತಾನೆ. ಸುರೇಶ ಆಧುನಿಕ ತರುಣ ಪೀಳಿಗೆಯ ಪ್ರತಿನಿಧಿ, ದೇವಧರ ತತ್ವಜ್ಞಾನದ ಅಧ್ಯಾಪಕ. ಶಕುಂತಲೆ ದೇವಧರ್‌ನನ್ನು ಪ್ರೀತಿಸುವ ವಿದ್ಯಾರ್ಥಿನಿ. ಸುರೇಶ ತನ್ನ ಕಾರ್ಯಕ್ಷಮತೆಯಿಂದ ತನ್ನ ಬಾಸ್ ಖನ್ನಾನ ಉದ್ಯೋಗದಲ್ಲಿ ಪಾರ್ಟ್‌ನರ್ ಆಗುತ್ತಾನೆ. ತನ್ನಿಂದಲೇ ಬಸಿರಾದ ಗೌರಿಯನ್ನು ಮದುವೆಯಾಗಲು ಅವನಿಗೆ ಮನಸ್ಸಿಲ್ಲ. ಇನ್ನು ಮಹತ್ವಾಕಾಂಕ್ಷಿ ದೇವಧರ್‌ನಿಗೆ ತನ್ನ ವಿದ್ಯಾರ್ಥಿನಿ ಶಕುಂತಲೆ ಪ್ರೀತಿಗಿಂತ ತನ್ನ ಕೆರಿಯರ್ ಮುಖ್ಯವಾದುದು ಇಲ್ಲಿ ದೇವಧರ್‌ನ ಅಸ್ತಿತ್ವವಾದಕ್ಕಿಂತ ಶಕುಂತಲೆಯ ಅಸ್ತಿತ್ವ ಪ್ರಶ್ನೆಯಾಗಿ ನಿಲ್ಲುತ್ತಲೆ ದೇವಧರ್ ಆಕೆಯನ್ನು ಬಿಟ್ಟರೂ ಜೀವನದಲ್ಲಿ ಬರುವುದನ್ನೆಲ್ಲ ಸ್ವೀಕರಿಸಲೇಬೇಕಾದ ಸ್ಥಿತಿ ಅವಳದಾಗುತ್ತದೆ. "ಜೀವನಕ್ಕೆ ಕೇಂದ್ರವೇ ಇಲ್ಲ" ಎನ್ನುವ ಮನಸ್ಥಿತಿಗೆ ಬರುತ್ತಾಳೆ. ಒತ್ತಡದಿಂದ ಮನುಷ್ಯ ಬದಲಾಗುತ್ತಾನೆ ಎನಿಸಿದರೂ ಅಸ್ತಿತ್ವವಾದ ಇಡೀ ದೇವಧರ್–ಶಕುಂತಲೆಯರನ್ನು ಬದಲಿಸುತ್ತದೆ. ಇದು 'ಸೃಷ್ಟಿ' ಕಾದಂಬರಿಯ ಕೇಂದ್ರ ಆಶಯ.

ಶಾಂತಿನಾಥ ದೇಸಾಯಿ ಅವರೇ ಹೇಳುವಂತೆ "ನನ್ನ ಮೂರನೆಯ ಕಾದಂಬರಿ 'ಸೃಷ್ಟಿ' ಸಂಪ್ರದಾಯದ ತಳಹದಿಯನ್ನು ಕಳೆದುಕೊಂಡ ರಾಯ್ ವಾದಿಯ ಮೂಲಭೂತ ತೊಳಲಾಟವನ್ನು ಪರಿಶೋಧಿಸುತ್ತದೆ. ಕಾದಂಬರಿಯ ಪೂರ್ವಾರ್ಧದಲ್ಲಿ ನಾಯಕ ದೇವಧರ್ ಒಬ್ಬ ಪ್ರೊಫೆಸರ್ ಆಗಿರುತ್ತಾನೆ. ಆದರೆ ಆನಂತರ ಪ್ರೊಫೆಸರನು ಕ್ಯಾಡ್‌ನೋ, ಡ್ಯಾಂಡಿಯೋ ಆಗಿ ನೈತಿಕ ತಾಟಸ್ಥ್ಯದಿಂದ ಜೀವನವನ್ನು ಎಂಜಾಯ್ ಮಾಡುತ್ತಾನೆ. ಕಾದಂಬರಿಯ ಉತ್ತರಾರ್ಧದಲ್ಲಿ ಅದೇ ನಾಯಕ ಕ್ರಿಯಾಶೀಲ ಮಾನವನಾಗಿ ಡಾಕ್ಟರ್ ದೇವಧರ್‌ನಾಗಿ ಪುನರ್ಜನ್ಮ

ಪಡೆಯುತ್ತಾನೆ. ಆದರೆ ಈ ಹಾದಿಯು ಭ್ರಷ್ಟ ಸಮಾಜದೊಂದಿಗೆ ದುರಂತಮಯ ಹೋರಾಟಕ್ಕೆ ಅವನನ್ನು ಗುರಿ ಮಾಡುತ್ತದೆ".(8)

'ಸಂಬಂಧ' ಕಾದಂಬರಿಯ ಭೂಮಿಕೆಯಲ್ಲಿ ಪ್ರಮುಖವಾಗಿ ಬರುವವರು ಶೀತಲಕುಮಾರ, ರಾಧಿಕ, ಪ್ರೊ॥ ಪರಮೇಶ್ವರಯ್ಯ (ಉರುಫ್ ಪೊಮ್ಮಣ್ಣ) ಇಲ್ಲಿ ಪ್ರಮುಖವಾಗಿ ಅಸ್ತಿತ್ವವಾದದ ಛಾಪು ಮಾಡಿರುವುದು ಶೀತಲಕುಮಾರ ಮತ್ತು ರಾಧಿಕಾಳ ಗುಣಗಳಲ್ಲಿ ಶೀತಲಕುಮಾರ ಕಾದಂಬರಿಕಾರನಾಗಿ ಹೆಸರು ಮಾಡಿದವನು ಅವನ ಏಳೋ-ಎಂಟೋ ಕಾದಂಬರಿಗಳನ್ನು ಬರೆದಿದ್ದಾನೆ. ಅವುಗಳಲ್ಲಿ 'ಸಂತೆಯೊಳಗೊಂದು ಮನೆ' ಕಾದಂಬರಿ ಸಿನಿಮಾ ಆಗುತ್ತಿದೆ. ಹೊಸತೊಂದು ಕಾದಂಬರಿ ಬರೆಯುವ ಸಿದ್ಧತೆಯಲ್ಲಿದ್ದು, ತನ್ನ ಕೊಲ್ಹಾಪುರದ ಗೆಳೆಯ ಪೊಮ್ಮಣ್ಣನ ಬಳಿಗೆ ಹೋಗಿ ಕಾದಂಬರಿ ಬರೆಯಲು ಸ್ಫೂರ್ತಿ ಏನಾದರೂ ದೊರೆಯಬಹುದೇ ? ಎಂದು ಅಲ್ಲಿಗೆ ಹೊರಡುತ್ತಾನೆ. ಆದರೆ ಪೊಮ್ಮಣ್ಣ ಶೀತಲಕುಮಾರನಿಗೆ 'ರಾಧಿಕಾ'ಳನ್ನು ಪರಿಚಯಿಸುತ್ತಾನೆ. ರಾಧಿಕಾ ಆಗಲೇ ವಿಧವೆಯಾಗಿದ್ದಾಳೆ. ಶೀತಲಕುಮಾರನ ಕಾದಂಬರಿಗಳನ್ನೆಲ್ಲ ಓದಿಕೊಂಡು ಮೆಚ್ಚಿಕೊಂಡಿದ್ದಾಳೆ. ಶೀತಲಕುಮಾರರಿಗೆ ಆಗಲೇ ಮದುವೆಯಾಗಿದ್ದು ಕಮಲ ಎಂಬ ಹೆಂಡತಿ ಇದ್ದಾಳೆ. ಆದರೂ ಶೀತಲ ಕುಮಾರ ರಾಧಿಕಾಳ ಬಗ್ಗೆ ಆಸಕ್ತಿ ತಾಳುತ್ತಾರೆ. ಅವಳೊಡನೆ ಕೊಲ್ಹಾಪುರದ ಹಲವು ಪ್ರಸಿದ್ಧ ಸ್ಥಳಗಳಲ್ಲಿ ಸುತ್ತಾಡುತ್ತಾರೆ. ಅವಳ ಸೌಂದರ್ಯ ಅವನನ್ನು ಆಕರ್ಷಿಸುತ್ತದೆ. ಕಾದಂಬರಿಕಾರನಾದ ಶೀತಲ ಕುಮಾರನೇ ಹೇಳಿಕೊಳ್ಳುವಂತೆ "ನನಗೆ ನನ್ನದೆಂಬ ಮೂಡು(Mood)ಗಳಲ್ಲ ಮನ;ಸ್ಥಿತಿಗಳಲ್ಲ. ಕೀಟ್ಸ್ ಹೇಳುವಂಥ ನೆಗೆಟಿವ್ ಕೇಪಬಲಟಿಯೇ (Negative Capability) ನನ್ನ ಮೂಲ ಪ್ರಕೃತಿಯಲ್ಲಿದ್ದಂತಿದೆ. ಅಂತೇ ನಾನು ಕಾದಂಬರಿಕಾರನಾಗಬೇಕು... ನನಗೆ ಸ್ವಂತ 'ವ್ಯಕ್ತಿತ್ವ' ಇಲ್ಲದ್ದರಿಂದಲೇ ನಾನು ಬೇರೆ ಬೇರೆ ಪಾತ್ರಗಳ ಮುಖವಾಡ ಧರಿಸುತ್ತಿರಬೇಕು" (9)

ಅಸ್ತಿತ್ವವಾದದ ಎಳೆ ಶೀತಲಕುಮಾರನ ಮಾತಿನಲ್ಲೆ ಸಿಗುತ್ತದೆ. ಅದೇ ರೀತಿ ರಾಧಿಕಾ ಶ್ರೀಧರನೆನ್ನುವವನನ್ನು ಪ್ರೀತಿಸಿ ಪರಿತ್ಯಕ್ತಳಾಗಿದ್ದಾಳೆ. ಹಾಗೆ ರಮೇಶನೆಂಬುವವನೊಂದಿಗೆ ಮದುವೆಯಾಗಿ ಆತ ಸತ್ತಿದ್ದಾನೆ. ಈಗ ಶೀತಲಕುಮಾರನನ್ನು ಹಚ್ಚಿಕೊಂಡಿದ್ದಾಳೆ. ಆದರೆ ಶೀತಲಕುಮಾರನ ಪ್ರೇರಣೆ-ಯಿಂದಾಗಿ ಶೀತಲಕುಮಾರನ ಸ್ನೇಹಿತ, ಸಿನಿಮಾ ನಿರ್ದೇಶಕ, ನಿರ್ಮಾಪಕ ಶೇಖರನ ಪರಿಚಯವಾಗುತ್ತದೆ. ರಾಧಿಕಾ ಶೇಖರ್‌ನೊಂದಿಗೆ ಸಿನಿಮಾದಲ್ಲಿ ನಟಿಸಲು ತೊಡಗುತ್ತಾಳೆ. ಆಗ ಕೊಲ್ಹಾಪುರದಿಂದ ಬಂದು ಬೆಂಗಳೂರಿನ ಶೀತಲಕುಮಾರನ

ಮನೆಯಲ್ಲೆ ಉಳಿದು ಕೊಳ್ಳುತ್ತಾಳೆ. ಆದರೆ ಅವಳೆಡೆಗೆ ಹೆಚ್ಚು ಆಕರ್ಷಿತನಾಗಿದ್ದ ಶೀತಲಕುಮಾರ ಆಕೆ ಶೇಖರ್‌ನೊಂದಿಗೆ ಹೊತ್ತಲ್ಲದ ಹೊತ್ತಲ್ಲಿ ಮನೆಗೆ ಬಂದು ಹೋಗಿ ಮಾಡುವುದು ಸರಿ ಎನಿಸುವುದಿಲ್ಲ. ಇದಕ್ಕೆ ಶೀತಲಕುಮಾರನ ಪೊಸೆಸಿವ್ ನೆಸ್ ಕಾರಣವಾಗುತ್ತದೆ. ಇಲ್ಲಿ ರಾಧಿಕಾಳದು ಅಸ್ತಿತ್ವದ ಹುಡುಕಾಟದ ಚಿತ್ರಣ. ಆಕೆ ಶ್ರೀಧರನ, ರಮೇಶನ, ಶೀತಲಕುಮಾರನ, ಕೊನೆಗೆ ಶೇಖರನ ಕೈಗೊಂಬೆಯಂತೆ ಬದುಕಬೇಕಾಗುತ್ತದೆ. ಕಡೆಗೆ ಶೇಖರನಿಂದಲೇ ಗರ್ಭವತಿಯಾಗಿ ಕಡೆಗೆ ಶೇಖರ್‌ಗೂ ಹೇಳದೆ ಅಬಾರ್ಷನ್ ಮಾಡಿಸಿಕೊಂಡು ಕೊಲ್ಹಾಪುರಕ್ಕೆ ಹೊರಡುತ್ತಾಳೆ. ಈ ಕಾದಂಬರಿಯ ಭಾಗದಲ್ಲಿ 'ಈಡಿಪಸ್ ಕಾಂಪ್ಲೆಕ್ಸ್‌ನ ಪ್ರಭಾವವಿದೆಯೇನೋ ಅನ್ನಿಸುತ್ತದೆ. ಇದು ಕೂಡ ಅಸ್ತಿತ್ವದ ಅಂಶವೆ ಆಗಿರುವುದರಿಂದ ಇಡೀ ಕಾದಂಬರಿ ಅಸ್ತಿತ್ವದ ಹುಡುಕಾಡದಲ್ಲೇ ಕೊನೆಗೊಳ್ಳುತ್ತದೆ. ರಾಧಿಕೆಯ ಪ್ರಭಾವಕ್ಕೆ ಒಳಗಾಗಿದ್ದ ಶೀತಲ ಕುಮಾರನಿಗೆ ತನ್ನ ಅವಳ ಸಂಬಂಧದ ನಿಜ ಸ್ವರೂಪದ ಅರಿವಾಗುತ್ತದೆ. "ರಾಧಿಕೆಯಿಲ್ಲದ ಮನೆ ಭಣ ಭಣವೆನಿಸತೊಡಗಿತು. ನನಗೊಬ್ಬ ಮಗಳಿದ್ದರೆ ಎಂದು ತುಂಬಾ ಹಳಹಳಿಸಿದೆ ರಾಧಿಕೆಯ ಸಹವಾಸದಲ್ಲಿ ತಾನು ಕಳೆದ ದಿನಗಳು ತನ್ನ ಇಡಿಯ ಜೀವನಕ್ಕೆ ನೆನಪಿನ ಬುತ್ತಿಯಾಗಬಹುದು ಎನ್ನುವ ಕಲ್ಪನೆ ಕೂಡ ಅವನಲ್ಲಿ ಮೂಡಿ ಬರುತ್ತದೆ." (10)

**ಬೀಜ** ಕಾದಂಬರಿಯ ಕಥಾನಾಯಕ **ಶ್ರೇಯಾಂಸ** ತಂದೆಯ ಅಪರ ಕಾರ್ಯಕ್ಕೆ ಕೃಷ್ಣಾಪುರಕ್ಕೆ ಬರಬೇಕಾಗುತ್ತದೆ. ಆತ ಕ್ರಿಶ್ಚಿಯನ್ ಹುಡುಗಿ ಲೀಝಿಯನ್ನು ಮದುವೆಯಾಗಿದ್ದಾನೆ. ಮದುವೆಗೆ ಮುನ್ನವೇ ತಂದೆಯ ಜೊತೆ ಜಗಳವಾಡಿಕೊಂಡು ಬಾಂಬೆಗೆ ಹೋಗಿ ಆತ ತನ್ನದೇ ಆದ ಬದುಕನ್ನು ಕಟ್ಟಿಕೊಂಡು ಇಪ್ಪತ್ತು ವರ್ಷಗಳಾಗಿವೆ. ಆದರೆ ಈಗ ಪಿತೃಕಾರ್ಯಕ್ಕೆ ಬರುವ ಶ್ರೇಯಾಂಸ ತಂದೆಯ ಜೊತೆಗಿನ ಸಂಬಂಧಗಳ ಜಾಲದಲ್ಲಿ ಸಿಲುಕಿ ನರಳುತ್ತಾನೆ. ಈ ಕಾರ್ಯವೆಲ್ಲ ಮುಗಿಸಿ ಮತ್ತೇ ಬಾಂಬೆಗೆ ಹೊರಡಬೇಕೆಂಬುದು ಅವನ ಎಣಿಕೆ. ಆದರೆ ಅವನ ಪೂರ್ವಿಕರ ಬೇರುಗಳನ್ನು ಕಿತ್ತುಕೊಳ್ಳಲು ಸಾಧ್ಯವಾಗದೆ ಮುಂಬೈಗೂ ಹೋಗಲಾಗದೆ ಗೊಂದಲದಲ್ಲಿ ಬೀಳುತ್ತಾನೆ. ಅಸ್ತಿತ್ವದ ಹುಡುಕಾಟದಲ್ಲೆ ತನ್ನ ಹೆಂಡತಿ ಲೀಝಿ ಮತ್ತು ಮಗಳಾದ ಕಲ್ಪನಳನ್ನು ಬಿಡಲಾರದೆ ಕೃಷ್ಣಾಪುರದ ಹುದಲಲ್ಲಿ ನಿಧಾನವಾಗಿ ಇಳಿಯುತ್ತಾನೆ. ಕೃಷ್ಣಾಪುರದಲ್ಲಿರುವ ಇವನ ಸ್ನೇಹಿತ ವಸಂತ ಆತನ ಹೆಂಡತಿ ನಿರ್ಮಲೆ, ಕಲ್ಯಾಣ ಶೆಟ್ಟರು ಇವರುಗಳ ಸಂಬಂಧ ಜೊತೆಗೆ ಇವನ ಹಳೆ ಪ್ರೇಯಸಿ, ವಸಂತನ ತಂಗಿ ರೇವತಿ, ಇವರ ಸಂಬಂಧಗಳು ಅವನನ್ನು ಕೃಷ್ಣಾಪುರದಲ್ಲೇ ಉಳಿಯುವಂತೆ ಮಾಡುತ್ತವೆ. ಕಡೆಗೆ ಆತ ತನ್ನ ಅಸ್ತಿತ್ವ ಇರುವುದು ಕೃಷ್ಣಾಪುರದಲ್ಲೆ ಎಂದು ನಿರ್ಧರಿಸಿ ಹೆಂಡತಿ ಲೀಝಿಯನ್ನು ಮಗಳು ಕಲ್ಪನಾಳನ್ನು ಬಿಟ್ಟು

ಕೃಷ್ಣಾಪುರದಲ್ಲೆ ಉಳಿಯುತ್ತಾನೆ. ಮುಂಬೈ ಗೆಳೆಯ ಸುರೇಶ ಇವನನ್ನು ಗೇಲಿ ಮಾಡಿದರೂ ಅದಕ್ಕೆ ಸೊಪ್ಪು ಹಾಕದೆ ಕೃಷ್ಣಾಪುರದಲ್ಲೆ ಉಳಿಯುತ್ತಾನೆ. **ಮುಕ್ತಿಯ ಗೌರೀಶನಂತೆ, ವಿಕ್ಷೇಪದ ರಾಹುಲನಂತೆ** 'ಅತಿ'ಯಾದ ಅಸ್ತಿತ್ವದ ಹುಡುಕಾಟ ಶ್ರೇಯಾಂಸನಿಗೆ ಇಲ್ಲದಿದ್ದರೂ ಮುಂಬೈಯಂತಹ ಶಹರವನ್ನು ಬಿಟ್ಟು ಮಣ್ಣಿನ ಋಣದ ಕೊಂಡಿಗೆ ಜೋತುಬೀಳುವುದು ಕೂಡ ಅವನ ವಿಫಲತೆಯೇ ಆಗುತ್ತದೆ. ಶ್ರೇಯಾಂಸ ಎಷ್ಟೇ ಓದಿಕೊಂಡಿದ್ದರೂ, ಕೈ ತುಂಬ ಸಂಬಳ ಬರುವ ಕೆಲಸವಿದ್ದರು, ಅದನ್ನೆಲ್ಲ ಬಿಟ್ಟು ತನ್ನ ಬೇರುಗಳ ಅಸ್ತಿತ್ವವನ್ನು ಬಿಡದೆ ಹಿಡಿಯುವುದು ಕಾದಂಬರಿಯ ಮುಖ್ಯ ಆಶಯ. ಅನಂತಮೂರ್ತಿಯವರ **ಭಾರತಿಪುರ** ಕಾದಂಬರಿಯ ಜಗನ್ನಾಥ, ಮತ್ತು 'ಬೀಜ'ದ ಶ್ರೇಯಾಂಸ ಇಬ್ಬರೂ ಒಂದೇ ಗುಣ ವಿಶೇಷ ಉಳ್ಳವರಂತೆ ವರ್ತಿಸಿ ಏನೋ ಕ್ರಾಂತಿ ಮಾಡುವವರಂತೆ ಬಂದು ಏನೂ ಮಾಡಲಾಗದ ಸ್ಥಿತಿಗೆ ಬಂದು ನಿಲ್ಲುವುದನ್ನು ಇಲ್ಲಿ ಕಾಣಬಹುದಾಗಿದೆ.

**ಅಂತರಾಳ** ದೇಸಾಯಿಯವರ ಆರನೇ ಕಾದಂಬರಿಯಾದರೂ ಇಲ್ಲಿ ಬರುವ ಕಥಾನಾಯಕ 'ವಿಕ್ರಮ ರಾಣೆ' ಎಂಬ ಮಧ್ಯ ವಯಸ್ಸಿನ ವ್ಯಕ್ತಿಯ ಆತ್ಮನಿವೇದನೆಯಾಗಿದೆ. ವಿಕ್ರಮ ರಾಣೆಗೆ ಮದುವೆಯಾಗಿದೆ. ಅವನ ಹೆಂಡತಿ ಯಶೋಧ. ಆದರೆ ಮರಾಠ ಕ್ಷತ್ರಿಯನಾದ ವಿಕ್ರಮ ಬ್ರಾಹ್ಮಣ ಹುಡುಗಿಯಾದ ಯಶೋಧೆಯನ್ನು ಮದುವೆಯಾಗುತ್ತಾನೆ. ಆದರೆ ಅವರ ಕುಟುಂಬದಲ್ಲಿ ಯಾರಿಗೂ ಇಷ್ಟವಿಲ್ಲ. ವಿಕ್ರಮನಿಗೆ ಮಾಧವ ಮತ್ತು ವಸುಂಧರೆ ಎಂಬ ಇಬ್ಬರು ಮಕ್ಕಳಿದ್ದಾರೆ. ವಂಶಪಾರಂಪರ್ಯವಾಗಿ ಬಂದಂತಹ ದಂಧ ನೋಡಿಕೊಳ್ಳುವುದನ್ನು ಬಿಟ್ಟು ಈತ ಸಿವಿಲ್ ಇಂಜಿನಿಯರ್ ಆಗಿ ಸರ್ಕಾರಿ ಕೆಲಸದಲ್ಲಿದ್ದಾನೆ. ಅಲ್ಲಿರುವ ಮೋಸ ಮತ್ತು ಲಂಚಗುಳಿತನಕ್ಕೆ ಬೇಸತ್ತು ಅದಕ್ಕೆ ಸ್ವಯಂ ನಿವೃತ್ತಿ ಘೋಷಿಸಿ ಬಡವರಿಗೆ ಕಡಿಮೆ ಖರ್ಚಿನಲ್ಲಿ ಮನೆ ಕಟ್ಟಿಕೊಡಲು ಯೋಚಿಸುತ್ತಿರುತ್ತಾನೆ. ಈ ಸಂದರ್ಭದಲ್ಲೆ ಅವನಿಗೆ ಜಾನ್ ಡಿಸೋಜ ಮತ್ತು ಅಶ್ವಿನಿಯರ ಪರಿಚಯವಾಗುತ್ತದೆ. ಅವರೂ ಕೂಡ ಇಂಜಿನಿಯರ್‌ಗಳಾಗಿದ್ದಾರೆ. ಅಶ್ವಿನಿ, ಜಾನ್ ಡಿಸೋಜನ ಜೊತೆ 'ಲಿವಿಂಗ್ ಟುಗೆದರ್' ತರಹ ಜೀವಿಸುತ್ತಿದ್ದಾಳೆ. ಅವಳಿಗೆ ವಸಂತ ಮಹಾಬಲೇಶ್ವರನೊಂದಿಗೆ ಮದುವೆಯಾಗಿದೆ. ಆತ ಮಹಾಬಲೇಶ್ವರದಲ್ಲಿದ್ದಾನೆ (ಕಲ್ಕಟ). ಈ ಸಮಯದಲ್ಲಿ ವಿಕ್ರಮನಿಗೆ ಅಶ್ವಿನಿಯ ದೇಹ ಸೌಂದರ್ಯ ಆಕರ್ಷಣೀಯವಾಗಿ ಕಾಣುತ್ತದೆ. ಆದರೆ ಇದರ ಸೂಕ್ಷ್ಮವನ್ನು ಅರಿತ ಯಶೋಧ ವಿಕ್ರಮನೊಂದಿಗೆ ಜಗಳಕ್ಕೆ ಮುಂದಾಗುತ್ತಾಳೆ. ಸಂಸಾರದಲ್ಲಿ ಸೂಕ್ಷ್ಮ ಬದಲಾವಣೆಗಳು ಕಾಣುತ್ತದೆ. ವಿಕ್ರಮ ತನ್ನ 'ಅಸ್ತಿತ್ವದ' ಪ್ರಶ್ನೆಯನ್ನು ಮುಂದಿಟ್ಟುಕೊಂಡು ಏನೋ ಮಾಡಲು ಹೋಗಿ ಮತ್ತೇನನ್ನೋ ಮಾಡುವವನಂತೆ ಕಾಣುತ್ತಾನೆ.

ಅಶ್ವಿನಿಯ ಸೆಳೆತ ಆತನನ್ನು ಹೆಚ್ಚಾಗಿ ಕಾಡುತ್ತದೆ. ವಿಕ್ರಮ ಮದುವೆಗೆ ಮುನ್ನವೂ ಮನೆಯಲ್ಲಿದ್ದ ಸೀತೆ ಎಂಬ ಮನೆ ಕೆಲಸದವಳೊಂದಿಗೆ ಸಂಬಂಧ ಬೆಳೆಸಿ ಆಕೆ ಬಸಿರಾಗಿ ಒಬ್ಬ ಮಗನನ್ನು ಹಡೆದಿದ್ದಾಳೆ. ಕಾದಂಬರಿಯ ಕಡೆಯಲ್ಲಿ ಅವಳ ಮನೆಗೆ ಹೋಗಿ ತನ್ನ ಮಗನಿಗೆ ಏನಾದರೂ ಮಾಡಬೇಕೆಂದು ಚಿಂತಿಸುತ್ತಾನೆ. ತನ್ನ ಅಸ್ತಿತ್ವದ ಹುಡುಕಾಟಕ್ಕೆ ಮತ್ತು ಗೊಂದಲಗಳ ಬಗೆಹರಿಸುವುದಕ್ಕೆ ಇವನಿಗೊಬ್ಬ ಮಾಸ್ತರ್ ಇದ್ದಾರೆ ಅವರೆ ಪೂಜಾರ್ ಮಾಸ್ತರ್ ಯಾರ ಮಾತನ್ನು ಕೇಳದ ವಿಕ್ರಮ ಅವರ ಮಾತಿಗೆ ತಲೆಬಾಗುತ್ತಾನೆ. ವಿಕ್ರಮನ ಎಷ್ಟೋ ಗೊಂದಲಗಳಿಗೆ ಪುಜಾರ್ ಮಾಸ್ತರ್ ದಾರಿ ತೋರಿ ಅವನ ಅಸ್ಮಿತೆಯನ್ನು ಗುರುತಿಸಿಕೊಳ್ಳಲು ಸಹಾಯಕರಾಗುತ್ತಾರೆ. ಕಡೆಗೆ ಅಶ್ವಿನಿ ಭುವನೇಶ್ವರಕ್ಕೆ ಹೊರಟು ಹೋಗುವುದರೊಂದಿಗೆ ಇವನ ಅಸ್ತಿತ್ವದ ಹುಡುಕಾಟ ನಿಲ್ಲುತ್ತದೆ. ಕಾದಂಬರಿಯೂ ಕೊನೆಯಾಗುತ್ತದೆ. ಈ ಕಾದಂಬರಿಯಲ್ಲಿ ಗಮನಿಸಬೇಕಾದ ಪ್ರಮುಖ ಅಂಶವೆಂದರೆ ಎಲ್ಲಾ ಪಾತ್ರಗಳು ವಿಕ್ರಮ ರಾಣೆಯ ಸಂಬಂಧದಲ್ಲೆ ಬೆಳೆದು ನಿಲ್ಲುತ್ತದೆ ಮತ್ತು ಅವನ ಅಸ್ತಿತ್ವದೊಂದಿಗೆ ಪ್ರತಿಸ್ಪಂದಿಸುತ್ತವೆ. ಇದರಿಂದ ಆತನ ಮನಸ್ಸು ಹೆಚ್ಚು ನಿಖರವಾಗುವುದರ ಬದಲು ಹೊಸ ಸಂಬಂಧದ ಹುಡುಕಾಟಕ್ಕೆ ಮುಂದಾಗುತ್ತದೆ.

ಶಾಂತಿನಾಥ ದೇಸಾಯಿ ಅವರ ಕಡೆಯ ಕಾದಂಬರಿ **ಓಂ ಣಮೋ** ಈ ಕಾದಂಬರಿ ಬರೆಯುವಷ್ಟರಲ್ಲಿ ಶಾಂತಿನಾಥ ದೇಸಾಯಿಯವರ ಒಳಮನಸ್ಸಿನ ಕತೆಗಾರ ಪಳಗಿದ್ದಾನೆ. ಆದ್ದರಿಂದ ಮುಕ್ತಿಯಲ್ಲಿ ಬರುವ ಅತಿಯಾದ ಆಂಗ್ಲಲೇಖಕರ ಉದ್ಘೋಷಗಳು, ಉದಾಹರಣೆಗಳು ಮತ್ತು ಕಾದಂಬರಿಯ ನಾಯಕರ ಮಾನಸಿಕ ಗೊಂದಲಗಳು ಇಲ್ಲಿ ಕಂಡುಬರುವುದಿಲ್ಲ. ಒಬ್ಬ ಪಳಗಿದ ಕಾದಂಬರಿಕಾರನ ಕಥಾ ಶೈಲಿ, ಹೊಸ ಭಾಷೆ, ಪರಿಸರ, ಧರ್ಮಶ್ರದ್ಧೆ, ಕಥೆಗೆ ಬೇಕಾದ ಪ್ರಬುದ್ಧ ಹಿನ್ನೆಲೆ, ತಯಾರಿ ಎಲ್ಲವೂ 'ಓಂ ಣಮೋ'ದಲ್ಲಿ ನಿಚ್ಚಳವಾಗಿ ಕಾಣಸಿಗುತ್ತದೆ.

**'ಓಂ ಣಮೋ'** ಕಾದಂಬರಿಯ ಪ್ರಮುಖ ಪಾತ್ರದಲ್ಲಿ **ಆ್ಯಡಂ ದೇಸಾಯಿ** ಮತ್ತು **ಆ್ಯನ್ ಈಗಲ್ಟನ್** ಪ್ರಮುಖ ಪಾತ್ರಧಾರಿಗಳಾದರೂ ಇಲ್ಲಿ ವ್ಯಕ್ತಿಯ ನೆಲೆಯಲ್ಲಿ ಅಸ್ತಿತ್ವವಾದ ಕಂಡುಬರದೆ 'ಧರ್ಮದ' ನೆಲೆಯಲ್ಲಿ ಕಾಣಿಸಿಕೊಂಡಿದೆ. 'ಜೈನ ಧರ್ಮ'ದ ಅಸ್ತಿತ್ವವನ್ನು ಮತ್ತು ಅದರ ಪೂರಕ ವಸ್ತುಗಳಾದ ಜೈನ ಯಾತ್ರಾಸ್ಥಳಗಳು, ವಿದ್ಯಾಚಾರಗಳು, ಮುನಿ–ಬಸದಿಗಳು ಮಠಾಧಿಕಾರಿಗಳು – ಇತ್ಯಾದಿ ಹಲವಾರು ವಿವರಗಳು ಕಾದಂಬರಿಯಲ್ಲಿ ತುಂಬಿಕೊಂಡು ಸಮೃದ್ಧವಾದ ಜೈನ ಪರಿಸರವನ್ನು ನಿರ್ಮಿಸುತ್ತವೆ. ಜೈನ ಧರ್ಮದ ಮೂಲ ರಚನೆಯಂತೆ ಅದರ ಐತಿಹಾಸಿಕತೆಯೂ ಅಲ್ಲಲ್ಲಿ ಚರ್ಚೆಯ ವಿಷಯವಾಗಿ ಸೇರಿಕೊಂಡು ನಿಜವಾದ ಅಸ್ತಿತ್ವವಾದ 'ಧರ್ಮ'ದಲ್ಲಿ

ಒಡಮೂಡಿದೆ. ಜೈನಧರ್ಮದ ಪರಿಸರವೇ ತನ್ನ ಅಸ್ತಿತ್ವವನ್ನು ಪಾತ್ರಗಳ ಮೂಲಕ ಕಟ್ಟಿಕೊಡುತ್ತದೆ. ಜೈನಧರ್ಮದ ಅಧ್ಯಯನಕ್ಕಾಗಿಯೇ ಆ್ಯನ್ ಬ್ರಿಟನ್‌ನಿಂದ ಭಾರತಕ್ಕೆ ಬರುತ್ತಾಳೆ. ಜೈನ ಧರ್ಮದ ಅಧ್ಯಯನ ಮಾಡುತ್ತಲೆ ಜೈನ ಧರ್ಮವನ್ನು ಸ್ವೀಕರಿಸಿ ಅದನ್ನು ಒಂದು 'ವ್ರತದಂತೆ' ನಡೆಸುತ್ತಾಳೆ. ಆದರೆ ಇವಳ ಸ್ನೇಹಿತ ಆ್ಯಡಂಗೆ ಜೈನ ಧರ್ಮದಲ್ಲಿ ಅಷ್ಟು ಮನಸ್ಸಿಲ್ಲ. ಅವನು ಇಷ್ಟಪಡುವ ಮಾನವ ಸಂಬಂಧಗಳೆಲ್ಲ ಜೈನಧರ್ಮದೊಂದಿಗೆ ತಳುಕು ಹಾಕಿಕೊಂಡಿದೆ. ಆ್ಯಡಂ ಕೂಡ ಅರ್ಧ ಜೈನನೇ ಆಗಿದ್ದಾನೆ. ಧರ್ಮದ ಅಸ್ತಿತ್ವವನ್ನು ಹುಡುಕಲು ಹೊರಡುವ ಆ್ಯನ್‌ಗೆ ಅದರ ಬಗ್ಗೆ ಅಧ್ಯಯನ ಮಾಡಿರುವ ಡಾ॥ ನಿರ್ಮಲ ಕುಮಾರರ ಪರಿಚಯವಾಗಿ ಅವರಿಂದ ಬಹಳಷ್ಟು ಧಾರ್ಮಿಕ ಮಾಹಿತಿಯನ್ನು ಪಡೆಯುತ್ತಾಳೆ. ಆದರೆ ಅವರ ಮಗಳು ರೋಜಳನ್ನು ಆ್ಯಡಂಗೆ ಕೊಟ್ಟು ಮದುವೆ ಮಾಡಬೇಕೆಂಬುದು ಡಾ॥ ನಿರ್ಮಲ ಕುಮಾರ್ ದಂಪತಿಗಳ ಹೆಬ್ಬಯಕೆ. ಇದನ್ನು ಸೂಕ್ಷ್ಮವಾಗಿ ತಿಳಿದ ಆ್ಯನ್ ಆ್ಯಡಂನಿಂದ ದೂರ ಉಳಿಯುತ್ತಾಳೆ. ಧಾರ್ಮಿಕ ನಿಷ್ಟನಾದ ಅಪ್ಪಸಾಹೇಬ (ಆ್ಯಡಂನ ತಾತ – ಆ್ಯಡಂ ತಂದೆ ನೇಮಿನಾಥನ ಅಣ್ಣ)ನ ಮಗ ಭರತನಲ್ಲಿ ಜೈನ ಧರ್ಮದ ವಿರೋಧಿ ನೆಲೆಯನ್ನು ಗುರುತಿಸಬಹುದಾಗಿದೆ. ಭರತನ ಪ್ರಕಾರ ಜೈನಧರ್ಮ ಎಂದೋ ಸತ್ತು ಹೋಗಿದೆ.

"ಜೈನ ಧರ್ಮದ ಪ್ರಕಾರ ಜೀವನ ಮಾಡಬೇಕೆಂದರೆ ಮುಗೀತು – ಎಲ್ಲರೂ ಉಪವಾಸ ಸಾಯಬೇಕು. ಅದರ ತತ್ವದ ಪ್ರಕಾರ ಜೀವಂತ ಇರೋದೆ ಶಕ್ಯವಿಲ್ಲ ಅಂತ ಹೇಳಿದೆ. ನಾ ಅದರ ಬಗ್ಗೆ ಕಾಳಜಿ ಮಾಡೋದಿಲ್ಲ. ಆಧುನಿಕ ಬದುಕಿನಲ್ಲಿ ಆ ತತ್ವಗಳೆಲ್ಲ ಹಾಸ್ಯಾಸ್ಪದವಾಗಿದೆ. ನೂರಕ್ಕೆ ತೊಂಬತ್ತೊಂಬತ್ತು ಜೈನರು ಆ ತತ್ವಗಳ ಪ್ರಕಾರ ಜೀವನ ಮಾಡೋದಿಲ್ಲ."[11]

ಅವನ ಪ್ರಕಾರ ಆ್ಯನ್‌ಳ ಜೈನ ಪ್ರೀತಿ ಹುಚ್ಚುತನದ್ದೆನಿಸುತ್ತದೆ. "ನನ್ನ ಮಟ್ಟಿಗಂತೂ ಜೈನಧರ್ಮ ತೀರ ನೆಗೆಟೀವ್ ಧರ್ಮ ಅದರಲ್ಲಿ ಪಾಸಿಟಿವ್ ಅನ್ನೋದು ಏನೂ ಇಲ್ಲ. ಅದು ಮೃತ್ಯುವಿನ ಕಡೆ ಒಯ್ಯೋ ಧರ್ಮ." "ಎಲ್ಲರೂ ಹಿಪಾಕ್ರಿಟ್ಸ್"[12] ಎಂದು ಹೇಳುತ್ತಲೆ. ಆದರೆ ಜೈನ ಧರ್ಮವನ್ನೇ ಅಡಿಪಾಯವಾಗಿಟ್ಟುಕೊಂಡು ಅದೆ ಹಿನ್ನೆಲೆಯಲ್ಲೆ ಬಿಸಿನೆಸ್ ಮಾಡುತ್ತಾನೆ. ಅವನು ತಿಳಿದಂತೆ ಆತ ಆಧುನಿಕ ಬಿಸಿನೆಸ್ ಮೆನ್." ಧರ್ಮವೆಂಬ ವಿಚಾರವು ಅಪ್ಪಾ ಸಾಹೇಬ ತನ್ನ ದಂಧೆಗೆ ಅಸ್ತ್ರವನ್ನಾಗಿಸಿ, ಕಡೆಗೆ ಸ್ವಾತಂತ್ರ್ಯ ಹೋರಾಟದಲ್ಲಿ ಸೆರೆಮನೆ ಸೇರಿ ಅದರ ಬಲದಿಂದಲೇ 'ರಾವ್ ಸಾಹೇಬ್', 'ಧರ್ಮ ಶಿರೋಮಣಿ' ಎಂಬಂತಹ ಬಿರುದುಗಳನ್ನು ಪಡೆದು ಅಪ್ಪಟ ಜೈನ

ಪರಿಚಾರಕನಂತಿದ್ದಾನೆ. ಆದರೆ ಈತನ ಮಗ ಭರತ ಆಧುನಿಕ ವ್ಯವಹಾರದ ಹೊಸ ಕೊಂಡಿಯಂತೆ ಕಾಣಿಸಿಕೊಳ್ಳುತ್ತಾನೆ.

ಆ್ಯನ್ ಜೈನಧರ್ಮವನ್ನು ಸ್ವೀಕರಿಸಿ ಮಹಾಮಸ್ತಕಾಭಿಷೇಕಕ್ಕೆ ಸಕಲ ಸಿದ್ಧತೆಯನ್ನು ಮಾಡಿಕೊಂಡು ಹೋಗಿ ಬಂದರು ಆಕೆ ಅಪ್ಪಟ ಪಾಶ್ಚಾತ್ಯ ದೇಶದವಳು ಹಾಗೂ ಕ್ರಿಶ್ಚಿಯನ್ ಧರ್ಮದವಳು, ಜೈನಧರ್ಮದ ವ್ಯಕ್ತಿ ನಿಷ್ಠೆ, ಅಹಿಂಸೆ, ಅಪರಿಗ್ರಹಗಳಂಥ ಮೌಲ್ಯಗಳು ಆ್ಯನ್‌ಳನ್ನು ಗಾಢವಾಗಿ ಪ್ರಭಾವಿಸುತ್ತವೆ. ಈ ಪ್ರಭಾವದ ಓಘದಲ್ಲಿ ಅವಳು ದೀಕ್ಷೆ ಪಡೆದು ಜೈನಳಾಗುತ್ತಾಳೆ. ಆದರೆ ಜೈನ ತಾತ್ವಿಕತೆಯನ್ನು ಸ್ವೀಕರಿಸಿದಂತೆ ಜೈನ ಸಮಾಜವನ್ನು ಒಪ್ಪಿಕೊಳ್ಳುವುದು ತನ್ನಿಂದ ಸಾಧ್ಯವಿಲ್ಲ ಎನ್ನುವ ಸತ್ಯವನ್ನು ಅವಳು ಕೊನೆಗೆ ಒಪ್ಪಿಕೊಳ್ಳಬೇಕಾಗುತ್ತದೆ. “ಸಾಮಾಜಿಕವಾಗಿ ನಾನು ಇಂಗ್ಲೀಷ್ ಸಮಾಜದವಳೇ ಅಲ್ಲಿಯ ಬುದ್ಧಿಜೀವಿಗಳ ಒಂದು ಅತ್ಯಂತ ಚೈತನ್ಯಶೀಲ ಸಮಾಜದ ಘಟಕ ನಾನು” (13) ಎಂದು ತಿಳಿದು ಧರ್ಮವೆಂಬುದು ಅಧ್ಯಯನ ಯೋಗ್ಯವೇ ಹೊರತು ಸ್ವೀಕಾರಾರ್ಹವಲ್ಲ ಎಂದು ತಿಳಿದು ಕಡೆಯಲ್ಲಿ ಆ್ಯಡಂ ಜೊತೆಗೆ ಬ್ರಿಟನ್‌ಗೆ ತೆರಳುವಾಗ “ಮತ್ತೊಮ್ಮೆ ನಾನು ಇಂಡಿಯಾಗೆ ಬಂದರೆ ‘ಬೌದ್ಧ ಧರ್ಮದ ಬಗ್ಗೆ ಅಧ್ಯಯನ ಮಾಡಬೇಕೆಂದಿದ್ದೇನೆ” (14) ಎಂದು ಆ್ಯಡಂಗೆ ತಿಳಿಸುತ್ತಾಳೆ. ಆ್ಯನ್‌ಳು ಜೈನಧರ್ಮವನ್ನು ಬಿಟ್ಟು ಮತ್ತೊಂದು ಧರ್ಮದ ಕಡೆಗೆ ಆಸಕ್ತಳಾಗುತ್ತಿದ್ದಂತೆ ಜೈನಧರ್ಮದ ಅಸ್ತಿತ್ವದ ಪ್ರಶ್ನೆಗಳು ಹಾಗೆ ನಿಲ್ಲುತ್ತವೆ.

ಮೇಲೆ ವಿವರಿಸಿದ ಅಷ್ಟೂ ಕಾದಂಬರಿಗಳಲ್ಲಿ ಕಾಣುವ ‘ಅಸ್ತಿತ್ವ’ ವಾದ ಶಾಂತಿನಾಥ ದೇಸಾಯಿ ಅವರ ಕಾದಂಬರಿಗಳ ‘ಮೂಲ ದ್ರವ್ಯ’ ವೇನೋ ಎಂಬಂತೆ ನಮಗೆ ಭಾಸವಾಗುತ್ತದೆ. ನವ್ಯರ ಮೂಲ ದ್ರವ್ಯವೂ ಇದೇ ಆಗಿರುವುದರಿಂದ ಅದಕ್ಕೆ ದೇಸಾಯಿ ಅವರು ಹೊರತಲ್ಲ ಎಂದಷ್ಟೇ ಹೇಳಬಹುದೇನೋ ?

## ಅಡಿ ಟಿಪ್ಪಣಿ

(1) ಮುಕ್ತಿ, ಶಾಂತಿನಾಥ ದೇಸಾಯಿ, ಬಾಪ್ಕೋ ಪ್ರಕಾಶನ, ಪುಟ-4
(2) ಮುಕ್ತಿ, ಶಾಂತಿನಾಥ ದೇಸಾಯಿ, ಬಾಪ್ಕೋ ಪ್ರಕಾಶನ, ಪುಟ-2
(3) ಮುಕ್ತಿ, ಶಾಂತಿನಾಥ ದೇಸಾಯಿ, ಬಾಪ್ಕೋ ಪ್ರಕಾಶನ, ಪುಟ-2
(4) ಮುಕ್ತಿ, ಶಾಂತಿನಾಥ ದೇಸಾಯಿ, ಬಾಪ್ಕೋ ಪ್ರಕಾಶನ, ಪುಟ-8
(5) ವಿಕ್ಷೇಪ, ಶಾಂತಿನಾಥ ದೇಸಾಯಿ, ಪ್ರಥಮ ಮುದ್ರಣ ಪಾಪ್ಯುಲರ್ ಪ್ರಕಾಶನ-ಪುಟ 256
(6) ವಿಕ್ಷೇಪ, ಶಾಂತಿನಾಥ ದೇಸಾಯಿ, ಪ್ರಥಮ ಮುದ್ರಣ ಪಾಪ್ಯುಲರ್ ಪ್ರಕಾಶನ-ಪುಟ 258
(7) ವಿಕ್ಷೇಪ, ಶಾಂತಿನಾಥ ದೇಸಾಯಿ, ಪ್ರಥಮ ಮುದ್ರಣ ಪಾಪ್ಯುಲರ್ ಪ್ರಕಾಶನ-ಪುಟ 258
(8) ಶಾಂತಿನಾಥ ದೇಸಾಯಿ, ಜಿ.ಎಸ್. ಅಮೂರ, ಸಾ.ಅಕಾಡೆಮಿ 2000, ಪುಟ 47-48
(9) ಸಂಬಂಧ –ಶಾಂತಿನಾಥ ದೇಸಾಯಿ, ಐಬಿಹೆಚ್ ಪ್ರಕಾಶನ, ಬೆಂಗಳೂರು–ಮುದ್ರಣ 1987
(10) ಸಂಬಂಧ –ಶಾಂತಿನಾಥ ದೇಸಾಯಿ, ಐಬಿಹೆಚ್ ಪ್ರಕಾಶನ, ಬೆಂಗಳೂರು–ಮುದ್ರಣ 1987
(11) ಓಂ ಣಮೋ –ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್ ಮುದ್ರಣ – 2010
(12) ಓಂ ಣಮೋ –ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್ ಮುದ್ರಣ – 2010
(13) ಓಂ ಣಮೋ –ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್ ಮುದ್ರಣ – 2010
(14) ಓಂ ಣಮೋ –ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್ ಮುದ್ರಣ – 2010

## ಅಧ್ಯಾಯ 5 : ದೇಸಾಯಿ ಅವರ ಕಾದಂಬರಿಗಳಲ್ಲಿ ಗಂಡು ಮತ್ತು ಹೆಣ್ಣಿನ ಸಂಬಂಧಗಳ ಶೋಧ

ಶಾಂತಿನಾಥ ದೇಸಾಯಿ ಅವರ ಏಳು ಕಾದಂಬರಿಗಳನ್ನು ಮತ್ತು ಅವುಗಳ ಒಳಗಿರುವ ಗಂಡು ಹೆಣ್ಣಿನ ಸಂಬಂಧಗಳ ಶೋಧವನ್ನು ಮಾಡಲು ಈ ಅಧ್ಯಾಯವನ್ನು ಮೀಸಲಾಗಿರಿಸಿದ್ದರೂ ಮೂಲದಲ್ಲಿ ದೇಸಾಯಿ ಈ ಏಳು ಕಾದಂಬರಿಗಳ ಮೂಲಕ ಸಮಾಜಕ್ಕೆ ಏನನ್ನು ಹೇಳಲು ಹೊರಟಿದ್ದಾರೆ ಎಂಬುದನ್ನು ಇಲ್ಲಿ ವಿವರಿಸಬೇಕಾಗಿದೆ. ಏಳು ಕಾದಂಬರಿಗಳನ್ನು ಏಕಸೂತ್ರದಲ್ಲಿ ಹಿಡಿದಿಟ್ಟು ವಿವರಿಸುವುದು ಕಷ್ಟವಾದರೂ ಸ್ಥೂಲವಾಗಿ ಅವುಗಳನ್ನು ವಿಮರ್ಶೆಯ ಒರೆಗೆ ಹಚ್ಚಿದರೆ ಈ ಕೆಳಗಿನ ಅಂಶಗಳು ಸ್ಪಷ್ಟವಾಗಿ ಎದ್ದು ಕಾಣುತ್ತವೆ.

ದೇಸಾಯಿಯವರು ತಮ್ಮ ಕಾದಂಬರಿಗಳಲ್ಲಿ ಹೆಣ್ಣಿಗೆ ಒಂದು ಪ್ರಶಸ್ತವಾದ ಸ್ಥಾನವನ್ನು ಕೊಟ್ಟಿದ್ದಾರೆ. ಲಂಕೇಶರ ಕಥೆ ಕಾದಂಬರಿಗಳಲ್ಲಿ ಹೆಣ್ಣು ಪ್ರಮುಖವಾದ ಒಂದು space ಅನ್ನು ಪಡೆದಿದ್ದಾಳೆ. ಬಹುಶ: ಶಾಂತಿನಾಥ ದೇಸಾಯಿ ಮತ್ತು ಲಂಕೇಶರು ಮಾತ್ರ ಹೆಣ್ಣಿನ ಪಾತ್ರಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟಿದ್ದಾರೆ. ನವ್ಯ ಕಾಲಘಟ್ಟದಲ್ಲೆ ಇವರಿಬ್ಬರನ್ನು ಬಿಟ್ಟರೆ ಬೇರೆ ಯಾವ ಕತೆಗಾರರು ಹೆಣ್ಣಿಗೆ ತಮ್ಮ ಬರವಣಿಗೆಯಲ್ಲಿ ಪ್ರಮುಖವೆನ್ನಿಸುವ ಪಾತ್ರ ಕೊಟ್ಟಿಲ್ಲ.

ಎರಡನೆಯದಾಗಿ ದೇಸಾಯಿ ಅವರ ಕಾದಂಬರಿಗಳಲ್ಲಿ ಬರುವ ಗಂಡು-ಹೆಣ್ಣುಗಳಿಬ್ಬರು ಓದಿದ ಬುದ್ಧಿವಂತಿಕೆಯ ಮತ್ತು ಅಭಿವೃದ್ಧಿ ಹೊಂದಿದವರಂತೆ ಕಾಣುತ್ತಾರೆ. ಬಡತನ, ಅನಕ್ಷರತೆ, ಅಜ್ಞಾನ, ಅತಿಯಾದ ದೈವಶ್ರದ್ಧೆ, ಜಾತಿ ವ್ಯವಸ್ಥೆ ಇವೆಲ್ಲವನ್ನು ಮೀರಿ ಕಾದಂಬರಿಯ ಕಥೆ ಓಡುತ್ತದೆ ಅಥವ ಎಪ್ಪತ್ತರ ದಶಕದ 'ಮೇಲ್ಮಧ್ಯಮ ವರ್ಗ' ಅವರಿಗೆ ತೀರ ಅಪ್ಯಾಯಮಾನವಾಗಿ ಕಂಡಿದೆ. ಕೇವಲ ಜಾತಿ ವ್ಯವಸ್ಥೆಯ ಬಡತನದ, ಧರ್ಮ ಶ್ರದ್ಧೆಯ ಸರಹದ್ದಿನೊಳಗೆ ಅವರು ಯಾವ ಪಾತ್ರಗಳನ್ನು ಚಿತ್ರಿಸಿಲ್ಲ. ಇದು ಓದುಗರಿಗೆ ಒಂದು ರೀತಿಯ ಸುಸಂಸ್ಕೃತ ಪರಿಸರವನ್ನು ಕಟ್ಟಿಕೊಡುವುದೇ ಅಲ್ಲದೆ ಅವರನ್ನು ಸೆಳೆಯುತ್ತದೆ ಕೂಡ.

ಮೂರನೆಯದಾಗಿ ದೇಸಾಯಿ ಅವರ ಕಾದಂಬರಿಯ ಹೆಣ್ಣುಗಳು ಒಂದು ಪ್ರಬುದ್ಧ ನಿರ್ಧಾರ ತೆಗೆದುಕೊಳ್ಳಲಾಗದೆ ಗೊಂದಲದಲ್ಲಿ ತೊಳಲಾಡುತ್ತಾರೆ. ಆದರೂ ಅವರ ಆಲೋಚನೆಗಳು ಮತ್ತು ಗಂಡಿನೊಂದಿಗೆ ಅವರ ಪ್ರತಿಕ್ರಿಯೆಗಳು ತುಂಬ ಸರಳವಾಗಿದ್ದು, ನಿರ್ಧಾರಗಳನ್ನು ಗಂಡಿಗೆ ಬಿಡುತ್ತಾರೆ. ಇದಕ್ಕೆ

ಅಪವಾದವೆಂಬಂತಿರುವುದು "ಓಂ ಣಮೋ' ಕಾದಂಬರಿಯ 'ಆ್ಯನ್' ಮಾತ್ರ ಆದರೂ ಸಂಬಂಧಗಳ ಬೆಳವಣಿಗೆಯಲ್ಲಿ ಪಾತ್ರಗಳು ಮನಸೆಳೆಯುತ್ತವೆ.

ಪ್ರಮುಖವಾಗಿ ಇಷ್ಟು ವಿಷಯಗಳ ಹಿನ್ನೆಲೆಯಲ್ಲಿ ಕಾದಂಬರಿಗಳನ್ನು ಒರೆಗೆ ಹಚ್ಚಬೇಕಾಗಿದೆ. ಮೊದಲಿಗೆ ಮುಕ್ತಿ ಕಾದಂಬರಿಯಲ್ಲಿ ಗೌರೀಶ-ಕಾಮಿನ-ಡಾಲಿ, ಶ್ರೀಕಾಂತ-ಮೇರಿ, ಸತ್ಯನ್-ಸುಶೀಲ. ಸತ್ಯೇನ್-ಸುಶೀಲ ಆಗಲೇ ಮದುವೆ ಯಾಗಿದ್ದಾರೆ. ಆದರೆ ಗೌರೀಶ ಮತ್ತು ಕಾಮಿನಿ ಈ ಕಾದಂಬರಿಯಲ್ಲಿ ಬರುವ ಪ್ರಮುಖ ಪಾತ್ರಗಳು ಶ್ರೀಕಾಂತನ ತಂಗಿಯಾದ ಕಾಮಿನಿಯನ್ನು ಮೊದಲು ನೋಡಿದ ಗೌರೀಶ ಅವಳನ್ನು ತಂಗಿಯಂತೆ ಕಲ್ಪಿಸಿಕೊಳ್ಳುತ್ತಾನೆ. ಶ್ರೀಕಾಂತನು, ನಾನೂ ಊಟಕ್ಕೆ ಕುಳಿತೆವು. ಕಾಮಿನಿಯೂ ನಮ್ಮ ಜೊತೆ ಕುಳಿತಳು. ಅಣ್ಣ ತಂಗಿಯರ ಜೋಡಿ ಬಹಳ ಸುಂದರವಾಗಿ ಶೋಭಿಸುತ್ತಿತ್ತು. ನನಗೂ ಇಂತ ಒಬ್ಬ ತಂಗಿ ಇದ್ದಿದ್ದರೆ – ಎಂಬ ವಿಚಾರ ಮನಸ್ಸನ್ನು ಸವರಿ ಹೋಯಿತು" (1). ಈ ಭಾವ ಮುಂದೆ ಪ್ರೇಮವಾಗಿ ಬದಲಾಗುತ್ತದೆ. ಅಷ್ಟೇ ಅಲ್ಲ ಶ್ರೀಕಾಂತ ಅವನ ಗೆಳತಿ ರೋಹಿಣಿ, ಗೌರೀಶ, ಕಾಮಿನಿ ಸತ್ಯೇಂದ್ರ ಎಲ್ಲರೂ ಜೋಗಕ್ಕೆ ಪ್ರವಾಸ ಕೈಗೊಂಡಾಗ ಕಾಮಿನಿ ಗೌರೀಶನನ್ನು ತನ್ನ ಯೌವ್ವನದಿಂದ, ರೂಪಿನಿಂದ ಸೂಜಿಗಲ್ಲಿನಂತೆ ಸೆಳೆಯುತ್ತಾಳೆ. ಮಾನಸಿಕ ಒತ್ತಡಕ್ಕೆ ಒಳಗಾದ ಗೌರೀಶ ಅವಕಾಶಕ್ಕಾಗಿ ಕಾಯುವವನಂತೆ ಅವಳ ಜೊತೆಗೆ ಇರುತ್ತಾನೆ. ಒಮ್ಮೆ ನಡೆಯುವಾಗ ಕಾಮಿನಿ ಜಾರಿ ನೀರಿನಲ್ಲಿ ಬೀಳುತ್ತಾಳೆ. ತಕ್ಷಣ ಅವಳನ್ನು ಹಿಡಿದೆತ್ತಿದ ಗೌರೀಶ "ಅವಳ ಮುಖದ ಮೇಲೆ ಚಲ್ಲಾಪಿಲ್ಲಿಯಾಗಿ ಬಿದ್ದ ಅವಳ ಒದ್ದೆ ಕೂದಲನ್ನು ಹಿಂದೆ ಸರಿಸುವ ಧೈರ್ಯ ಮಾಡಿದೆ. ಕಾಮಿನಿ ಲಜ್ಜೆಯಿಂದ, ಸಂಕೋಚದಿಂದ ನಕ್ಕಳು."

"ಆದರೆ ನನಗೆಲ್ಲಿಯೂ ಪೆಟ್ಟು ಹತ್ತಿಲ್ಲ"

"ನಿಜವಾಗಿಯೂ ? " ನನ್ನ ಧ್ವನಿ ನಡುಗುತ್ತಿತ್ತು.

"ಹು....."

"ಕಾಮಿನಿ..."

"ಉಂ ?"

"ನನ್ನನ್ನು ಕ್ಷಮಿಸು" ಎಂದವನೆ ನನ್ನ ಸುಡುತ್ತಿದ್ದ ತೋಳಿನಲ್ಲಿ ಅಂಕಿತಳಾದ ಕಾಮಿನಿಯ ದೇಹವನ್ನು ಗಟ್ಟಿಯಾಗಿ ಅಪ್ಪಿದವನೇ ಅವಳ ನಡುಗುತ್ತಿದ್ದ ಅಧರದ ಮೇಲೆ ಮುತ್ತನೊತ್ತಿದೆ"(2) ಈ ಘಟನೆಯಿಂದ ಹೆಚ್ಚು ಪ್ರೇಮಭಾವ ತುಂಬಿಕೊಂಡ ಗೌರೀಶ ಅವಳನ್ನು ಮನಸಾರೆ ಇಷ್ಟಪಡುತ್ತಾನೆ. ಅವಳನ್ನು ಮದುವೆಯಾಗಲು ಸಿದ್ಧನಾಗುತ್ತಾನೆ. ಆದರೆ ಅದಕ್ಕೂ ಮುನ್ನ ಕಾಮಿನಿಯೊಂದಿಗೆ ಈ ವಿಷಯವಾಗಿ ಚರ್ಚಿಸಬೇಕು ಎನಿಸಿ ಅವಳನ್ನು ರೈಲ್ವೆ ಸ್ಟೇಷನ್‌ಗೆ ಕರೆಯುತ್ತಾನೆ. ಆಕೆ ಬರುವುದು

ನಿಧಾನವಾಗಿ ಸ್ಟೇಷನ್‌ನಲ್ಲಿ ತೊಳಲಾಡುತ್ತಾನೆ. ಅವಳು ಬಂದಾಗ ಪ್ರೇಮದ ಮದುವೆಯ ಮಾತಾಗುತ್ತದೆ. ಆದರೆ ಕಾಮಿನಿ ಗೌರೀಶನಿಗಿಂತ ಪ್ರಬುದ್ಧೆ, ಆದ್ದರಿಂದ ಪ್ರೀತಿಸಲು ಪ್ರಯತ್ನಿಸುವುದಾಗಿ ಭರವಸೆ ಕೊಟ್ಟು ಈ ರೀತಿ ಪ್ರತಿಕ್ರಿಯಿಸುತ್ತಾಳೆ. "ಯೋಗ್ಯ-ಅಯೋಗ್ಯ! ಆ ಪ್ರಶ್ನೆಯೇ ಈಗ ಬರುವುದಿಲ್ಲ ಗೌರೀಶ, ನೀನು ಸ್ವಲ್ಪ ಹೆಚ್ಚು ಗಟ್ಟಿಯಾಗಿದ್ದಿದ್ದರೆ ನಿನ್ನಲ್ಲಿ ಸ್ವಲ್ಪ ಹೆಚ್ಚು...ಸಾಮರ್ಥ್ಯ..."(3) ಹೀಗೆ ಹೇಳಿ ಅವನ ಮುಂದಿನ ಗುರಿಯ ಬಗ್ಗೆ ವಿಚಾರಿಸುತ್ತಾಳೆ "ನೀನು ಮುಂದೇನಾಗಬೇಕೆನ್ನುವಿ ?" "ಎಂ.ಎಸ್ಸಿ.ಯನ್ನಂತೂ ಮೊದಲು ಮುಗಿಸುವುದು... ಮುಂದಿನದು ಮುಂದೆ... ನಿನಗೇನೆನಿಸುವುದು-ನಾನೇನಾಗಬೇಕೆಂದು ನಿನ್ನ ಇಚ್ಛೆ ?" "ಒಬ್ಬ ದೊಡ್ಡ ಆಫೀಸರ್ – ಆಯ್.ಎ.ಎಸ್.ಗೇಕೆ ಕೂಡ್ರುವುದಿಲ್ಲ ?"(4) ಈ ಮಾತಿನಿಂದ ಗೌರೀಶ ತನಗೆ ಯೋಗ್ಯನಲ್ಲ ತನ್ನನ್ನು ಮದುವೆಯಾಗುವವನು ದೊಡ್ಡ ಆಫೀಸರ್ ಆಗಿರಬೇಕೆಂದು ಅವಳು ಆಗಲೇ ನಿರ್ಧರಿಸಿಯಾಗಿದೆ. ಅದು ಗೌರೀಶನೇ ಆಗಬಹುದು ಇನ್ನ್ಯಾರಾದರು ಆಗಬಹುದು.

ಈ ಘಟನೆಯಿಂದ ಗೌರೀಶ ವಿಚಲಿತನಾಗುತ್ತಾನೆ. ಅಷ್ಟು ದಿನಗಳ ಅವಳ ಮೇಲಿನ ಪ್ರೀತಿ ಗೌರವ ಕಡಿಮೆಯಾಗದಿದ್ದರೂ ಈ ಮಾತಿನಿಂದ ಅವನ ಮನಸ್ಸು ಛಿದ್ರವಾಗುತ್ತದೆ. ಇದರಿಂದಾಗಿ ಅವನ ಪ್ರೀತಿ ಕಾಮಿನಿಯಿಂದ ಜಿಗಿದು ಡಾಲಿಯತ್ತ ವಾಲುತ್ತದೆ. ಡಾಲಿ ಕ್ರಿಶ್ಚಿಯನ್ ಹೆಣ್ಣಾದರೂ ಅವಳಲ್ಲಿ ಅಂಧ ಶ್ರದ್ಧೆಗಳಿಲ್ಲ, ಬೂಟಾಟಿಕೆಗಳಿಲ, ಗೌರೀಶನ ಸಖ್ಯ ಬೆಳೆದ ಮೇಲೆ ಅವಳಲ್ಲಿ ಒಂದು ನಿರ್ಲಿಪ್ತತೆ ಇದೆ. ಅವಳೇ ಹೇಳುವಂತೆ "ನಮ್ಮ ಲೈಂಗಿಕ ಸಂಬಂಧದಲ್ಲಿ ಕಾಮೋತ್ಕಟತೆಯಿಲ್ಲ, ಭಾವೋದ್ವೇಗವಿಲ್ಲ-ನಮ್ಮ ಸಹವಾಸದ ವಿಕಾಸ-ವಿಸ್ತಾರ ಮಾತ್ರ".
"ಅವಳು ಕೊಡುವ ಆನಂದದಲ್ಲಿ-ಶಾಂತ ತಟಸ್ಥವಿದೆ ವಿಲಕ್ಷಣವಾದ ಮಾತೃತ್ವವಿದೆ !" ಈ ಮಾತೃತ್ವದ ಗುಣವೇ ನನ್ನನ್ನು ಅವಳೆಡೆಗೆ ಆಕರ್ಷಿಸಿತಲ್ಲವೇ ?(5) ಕಾಮಿನಿಯ ಪ್ರೇಮದಲ್ಲಿ ಸಿಲುಕಿ ಗೌರೀಶ ಅದು ಸಿಗದಿದ್ದಾಗ ಡಾಲಿಯ ಕಡೆ ಒಲಿಯಲು ಇದು ಸಹಾಯಕವಾಗುತ್ತದೆ. ಅಷ್ಟರಲ್ಲಿ. ಕಮ್ಯುನಿಸ್ಟ್ ವಕ್ತಾರನಾಗಿರುವ ಕಾ. ಆಚಾರ್ಯ ಕಾಮಿನಿಯ ಸಖ್ಯ ಬೆಳೆಸುತ್ತಾನೆ. ಒಮ್ಮೆ ಕಾಮಿನಿಯ ಮನೆಗೆ ಬಂದು ಅಲ್ಲೆ ತಂಗುತ್ತಾನೆ. ರಾತ್ರಿ ಗೌರೀಶ ಎಚ್ಚರದಿಂದಿದ್ದು ಕಾ. ಆಚಾರ್ಯ ಮಲಗಿದ್ದ ರೂಮಿಗೆ ಹೋಗಿ ನೋಡಿದಾಗ ಆತ ಅಲ್ಲಿರದಿದ್ದುದು ಆತ ಕಾಮಿನಿಯ ರೂಮಿಗೆ ಹೋಗಿರಬಹುದು ಎಂದು ನಿರ್ಧರಿಸುತ್ತಾನೆ. ಇದರಿಂದ ವಿಚಲಿತನಾದ ಗೌರೀಶ ಸಂಪೂರ್ಣವಾಗಿ ಡಾಲಿಯ ಕಡೆಗೆ ಆಕರ್ಷಿತನಾಗುತ್ತಾನೆ. ಮದುವೆಗೆ ಮುನ್ನವೇ ದೈಹಿಕ ಸಂಪರ್ಕವೇರ್ಪಟ್ಟರು ಡಾಲಿಯ ಜೊತೆಗೆ ಇರುವಷ್ಟು ಸಮಯ ಗೌರೀಶ ಚೇತೋಹಾರಿಯಾಗಿ ಇರಬಲ್ಲ ಹಾಗೆ ಅವಳೆಡೆಗೆ ಸಲ್ಪ ಸಂಶಯವು ಇದೆ. ಆದರೆ

ಅದು ಅಲ್ಪ ಪ್ರಮಾಣದ್ದಷ್ಟೆ. ನೈತಿಕ ಬದುಕು ನಂಬಿಕೆ ಎಂಬ ಭದ್ರ ಅಡಿಪಾಯದ ಮೇಲೆ ನಿಂತಿದೆ ಅದು ಗೌರೀಶನಿಗೆ ಬೇಕೇ ಬೇಕಾದ ಒಂದು ಭದ್ರತೆ ಕೂಡ ಆಗಿದೆ. ಇದೇ ಸಂದರ್ಭದಲ್ಲಿ ಕಾಮಿನಿ ಗರ್ಭವತಿಯಾಗಿ ಅದನ್ನು ತೆಗೆಸಿದ್ದಾಳೆ. ಅಪೆಂಡಿಸೈಟೆಸ್ ಆಗಿತ್ತೆಂದು ಎಲ್ಲ ಕಡೆ ಹೇಳಯಾಗಿದೆ ಈ ವಿಚಾರ ತಿಳದ ಮೇಲೆ ಗೌರಿ ಸಂಪೂರ್ಣ ಬದಲಾಗುತ್ತಾನೆ.

"ನನ್ನ ತಲೆಯಲ್ಲಿ ಕಾಮಿನಿ – ಕಾ.ಆಚಾರ್ಯ ಗಾಂಗಲರ ಸಂಬಂಧದ ಬಗ್ಗೆ ಕಾಲ್ಪನಿಕ ಚಿತ್ರಗಳು ಸಿನಿಮಾದಂತೆ ತಲೆಯಲ್ಲಿ ಸರಸರನೆ ಹಾಯ್ದು ಹೋದವು. ಕಣ್ಣು ಒರೆಸಲು ಬಂದ ಗಾಂಗಲರು ಕಣ್ಣಿನಲ್ಲಿ ಧೂಳು ಹಾಕಿದರು ಕಾಮಿನಿಯೊಡನೆ ಮೊದಲು ರಾಜಕಾರಣ ಮಾತನಾಡುತ್ತ ಸಾವುಕಾಶವಾಗಿ 'ಪ್ರೇಮ'ದ ಬಗ್ಗೆ ಮಾತನಾಡಲು ಸುರು ಮಾಡಿದರು... ಈ ರಾಜಕಾರಣಿ. ಕಾಮಿನಿಯ ಬೆನ್ನಿನ ಮೇಲೆ ಕೈಯಾಡಿಸುತ್ತ ಸಾವುಕಾಶ... ಮುಂದೆ... ಬಸಿರು ನಿಂತ ಕೂಡಲೆ ಆಪರೇಷನ್ ... ಹಾ...ಹಾ...ಹಾ... ಅಪೆಂಡಿಸೈಟಿಸ್ ! ಎಲ್ಲ ಸ್ಪಷ್ಟ ತಿಳಯಿತು..."[6] ಗೌರೀಶ–ಡಾಲಿಯವರ ಸಂಬಂಧ ಕೂಡ ಕಾಮಿನಿ ಗೌರೀಶನಿಗೆ ಒಲಿಯದ ಕಾರಣದಿಂದಲೇ ಉಂಟಾದದ್ದು ಎಂಬುದನ್ನು ಇಲ್ಲಿ ತಿಳಯಬೇಕು. ಡಾಲಿಯೊಂದಿಗಿನ ದೈಹಿಕ ಸಂಬಂಧದಿಂದ ಉಂಟಾಗುವ ಪರಿಣಾಮಗಳನ್ನು ಮಾತ್ರ ಗೌರೀಶ ಸಹಿಸಲಾರ. ಒಮ್ಮೆ ಡಾಲಿ ಗೌರೀಶನಿಗೆ ಕೇಳುತ್ತಾಳೆ, "ನನಗೆ ಒಂದು ಇಚ್ಛೆ ಉಂಟಾಗಿದೆ : ನಾನು ತಾಯಿಯಾಗಬೇಕೆಂದು"

"ಆಂ ?" ನಾನು ಆಶ್ಚರ್ಯಚಕಿತನಾದೆ; ಭಯಗೊಂಡೆ."

"ಆಶ್ಚರ್ಯವೇನಿದೆ ಅದರಲ್ಲಿ"

"ಅಲ್ಲ–ಅಂದರೆ ಲಗ್ನ ಮಾಡಿಕೊಳ್ಳುವ ವಿಚಾರ ಬಂತೆನ್ನು ಎಲೆಯಲ್ಲಿ"

"ಲಗ್ನ ? ಛೇ, ಆ ವಿಚಾರವನ್ನೇ ಕಿತ್ತು ಹಾಕಿರುವೆ ಎಂದೋ..."

"ಲಗ್ನ ಬೇಡ ಮಕ್ಕಳು ಬೇಕು; ಇದು ಒಳ್ಳೇ ನ್ಯಾಯ? [7] ಇದರಿಂದ ವಿಚಲಿತನಾಗದ ಗೌರಿ ಕಡೆಗೆ ಮುಂಬೈಯಿಂದ ನೈರೋಬಿಗೆ ಹೊರಡಲು ಹಡಗಿನಲ್ಲಿ ಎರಡು ಟಿಕೆಟ್ ಬುಕ್ ಮಾಡಿಸಿ ಡಾಲಿಯೊಂದಿಗೆ ಹೊರಡಲು ಅನುವಾಗುವುದ–ರೊಂದಿಗೆ ಕಾದಂಬರಿ ಮುಗಿಯುತ್ತದೆ. ಇದರ ಜೊತೆಗೆ ಕಾಮಿನಿಯ ಅಣ್ಣ ಶ್ರೀಕಾಂತನಿಗೆ ಟಿ.ಬಿ. ಕಾಯಿಲೆ ಬಂದಿದೆ. ಆದ್ದರಿಂದ ಚಿಕಿತ್ಸೆಗಾಗಿ ಅವನು ವಾನ್‌ಲೆಸ್‌ವಾಡಿಗೆ ಹೋಗಿದ್ದಾನೆ. ಅಲ್ಲ ಅವನಿಗೆ ಮೇರಿ ಎಂಬ ನರ್ಸ್ ಪರಿಚಿತಳಾಗಿ ಅದು ಪ್ರೇಮಕ್ಕೆ ತಿರುಗುತ್ತದೆ. ಈ ವಿಷಯವನ್ನು ಗೌರೀಶನಿಗೆ ಹಲವು ಪತ್ರಗಳಲ್ಲಿ ಶ್ರೀಕಾಂತ ಬರೆದಿರುತ್ತಾನೆ. ಮೇರಿಯ ಮಾತೃಪ್ರೇಮ ಶ್ರೀಕಾಂತನನ್ನು ಬಹುವಾಗಿ ಸೆಳೆದಿದೆ ಮತ್ತು ಶ್ರೀಕಾಂತನಿಗೆ ಮೇರಿಯಲ್ಲಿ ಪ್ರೇಮಾಂಕುರವಾಗಿದೆ. ಮೇರಿ ಕೂಡ

ಅದನ್ನು ನಿರಾಕರಿಸಲು ಸಿದ್ಧಳಲ್ಲ. ಆದರೂ ಅವರಿಬ್ಬರು ಆಸ್ಪತ್ರೆಯಲ್ಲಿ ಅನ್ಯೋನ್ಯದಿಂದಲೇ ಇದ್ದಾರೆ. ಆದರೆ ಮದುವೆಗೆ ಮುನ್ನವೇ ಶ್ರೀಕಾಂತ ಸಾಯುತ್ತಾನೆ. ಇದರೊಂದಿಗೆ ಶ್ರೀಕಾಂತ-ಮೇರಿಯರ ಸಂಬಂಧ ಅಂತ್ಯವಾಗುತ್ತದೆ.

ದೇಸಾಯಿ ಅವರ ಎರಡನೇ ಕಾದಂಬರಿ **ವಿಕ್ಷೇಪ**. ಈ ಕಾದಂಬರಿಯ ಭೂಮಿಕೆಯಲ್ಲಿ ರಾಹುಲ-ಮಾಧವಿ-ಕುಂದ, ಅರವಿಂದ-ವೈದೇಹಿ, ರಣಜಿತ-ಶಿರೀನ್ ಪ್ರಮುಖವಾದ ಪಾತ್ರಗಳು ಇಲ್ಲಿ ಮುಖ್ಯವಾಗಿ ಮಾಧವಿ ಮತ್ತು ರಾಹುಲ್‌ನ ಸಂಬಂಧಗಳನ್ನು ವಿಶ್ಲೇಷಣೆಗೆ ಒಳಗು ಮಾಡಿದರೆ ರಾಹುಲ್ ತೀರ 'ಅಗ್ರೆಸ್ಸಿವ್' ಆದ ಕಥಾನಾಯಕ ಮಾಧವಿಯನ್ನು ಬಹುವಾಗಿ ಹಚ್ಚಿಕೊಂಡಿದ್ದಾನೆ. ಅವನು ಅವಳನ್ನು ಮದುವೆಯಾಗಲು ನಿರ್ಧರಿಸುತ್ತಾನೆ. ಆದರೆ ಬೆಳೆದ ಸಮಾಜದ ಪ್ರಭಾವಿ ಅಂಶಗಳಾದ ಇಂಗ್ಲೀಷ್ ಶಿಕ್ಷಣ, ರೆಸ್ಟೋರೆಂಟ್ ಜೀವನ, ಟೆನಿಸ್ ಆಟ, ಪಿಕ್‌ನಿಕ್ ಇಷ್ಟೆ ಅವನ ಬದುಕು. ಆದರೆ ಮೇಲ್ಮಧ್ಯಮ ವರ್ಗದಲ್ಲಿ ಬೆಳೆದ ರಾಹುಲ್ ಮಾಧವಿಯನ್ನು ಮದುವೆಗೆ ಮುನ್ನವೇ ದೈಹಿಕ ಸಂಪರ್ಕಕ್ಕೆ ಹಾತೊರೆಯುತ್ತಾನೆ. ಎರಡು ಬಾರಿ ಅದಕ್ಕಾಗಿ ಅವಳಗೆ 'ಅವಕಾಶ' ನೀಡುತ್ತಾನೆ. ಆದರೆ ಮಾಧವಿ ಬೆಳೆದ ಹುಡುಗಿಯಾದರೂ, ವಿದ್ಯಾವಂತೆಯಾದರೂ ಆ ವಿಚಾರದಲ್ಲಿ ಜಾಗರೂಕಳಾಗಿ ಇಲ್ಲದ ಸಬೂಬುಗಳನ್ನು ಕೊಟ್ಟು ಪಲಾಯನದ ಹಾದಿ ತುಳಯುತ್ತಾಳೆ. ಇದರಿಂದ ವ್ಯಗ್ರಗೊಂಡ ರಾಹುಲ್ ಅವಳನ್ನು ಬಿಡಲು ತೀರ್ಮಾನಿಸುತ್ತಾನೆ. ಇದೇ ಸಮಯದಲ್ಲಿ ಮಾಧವಿ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗುತ್ತಾಳೆ. ಅಲ್ಲಿ ಅವಳ ಕಕ್ಕ ಮತ್ತು ತಾಯಿಯರನ್ನು ಪರಿಚಯಿಸುತ್ತಾಳೆ. ಇದರಿಂದ ರಾಹುಲ್‌ಗೆ ಮಾಧವಿಯ ಕುಟುಂಬದ ಬಗ್ಗೆ ಕೆಲವು ಅನುಮಾನಗಳು ಮೂಡಿ ಅದನ್ನು ಪರಿಹರಿಸಿಕೊಳ್ಳಲು ಅವಳ ಮನೆ ಆಳು 'ಅಬ್ದುಲ್' ನನ್ನು ನೇರವಾಗಿಯೇ ಕೇಳುತ್ತಾನೆ. ಆದರೆ ಸಮರ್ಪಕವಾದ ಉತ್ತರ ಆತನಿಂದ ಸಿಗುವುದಿಲ್ಲ.

ಇದರಿಂದ ವಿಕ್ಷಿಪ್ತತೆಗೊಳಗಾದ ರಾಹುಲ್ ಮಾಧವಿಯನ್ನು ಬಿಟ್ಟು 'ಶಿರೀನ್'ಳ ಗುಣಗಾನ ಮಾಡಲು ಮುಂದಾಗುತ್ತಾನೆ. ಈ ತೊಳಲಾಟದ ಮಧ್ಯದಲ್ಲಿ ನಿಜವಾಗಿಯೂ ರಾಹುಲನಿಗೆ ಅತ್ಯಂತ ಆತ್ಮೀಯವಾಗಿ ಸಹಾಯ ಮಾಡುವವರು ಪ್ರೊ॥ ವಿಲಿಯಮ್ಸ್ ಮತ್ತು ರಾಹುಲನ ಸ್ನೇಹಿತ ಅರವಿಂದ ಮಾತ್ರ. ಈತ ಗೊಂದಲದಲ್ಲಿ ಸಿಲುಕಿದಾಗ ಪ್ರೊ॥ ವಿಲಿಯಮ್ಸ್ ಅವನ ಗೊಂದಲವನ್ನು ನಿವಾರಿಸಲು ಪ್ರಯತ್ನಿಸುತ್ತಾರೆ.

"ಸಾರ್ ನಾನೊಂದು ಮಹತ್ವದ ಪ್ರಶ್ನೆ ಕೇಳಲೆ ? – ಇದು ವೈಯಕ್ತಿಕ ಪ್ರಶ್ನೆ" ರಾಹುಲ ನಾಂದಿ ಹಾಡಿದ.

"ಕೇಳು"

"ನಾನು ಮಾಧವಿಯನ್ನು ಲಗ್ನವಾದರೆ ನನ್ನ ಉದ್ಧಾರವಾಗುವುದೇ, ಸರ್ ?" ಎಂದು ರಾಹುಲ ಒಮ್ಮಲೆ ನಾಟಕೀಯವಾಗಿ ಕೇಳಬಿಟ್ಟ.

"ಅದನ್ನು ನಾ ಹೇಗೆ ಹೇಳಬಲ್ಲೆ, ರಾಹುಲ ? ಅಲ್ಲಿ ಲಗ್ನಕ್ಕೂ ಉದ್ಧಾರಕ್ಕೂ ಸಂಬಂಧ ಯಾಕೆ ಹಚ್ಚಬೇಕು ? ನಿನ್ನ ಉದ್ಧಾರ ನಿನ್ನ ಕೈಯಲ್ಲಿದೆ. ಲಗ್ನ ಅದಕ್ಕೆ ಸಹಾಯ ನೀಡಬಹುದು. ಒಮ್ಮೊಮ್ಮೆ ಸಹಾಯದ ಬದಲಾಗಿ ಆತಂಕವನ್ನೊಡ್ಡ-ಬಹುದು, ನಿಜ ಆದರೆ ನಿನ್ನ ಉದ್ಧಾರ ನಿನ್ನ ಕೈಯಲ್ಲಿಯೇ !"(8)

ಅರವಿಂದ ರಾಹುಲ್‌ನನ್ನು ಭೇಟಿಯಾದಾಗ ಮಾಧವಿಯ ವಿಷಯವಾಗಿ ಇಲ್ಲ ಸಲ್ಲದ ಅಪವಾದಗಳನ್ನು ರಾಹುಲ್ ಮಾಧವಿಯ ಮೇಲೆ ಆರೋಪಿಸಿದಾಗ ಅರವಿಂದ್ ಅವನ ವ್ಯಕ್ತಿತ್ವವನ್ನು ಕುರಿತು ಹೀಗೆ ಹೇಳುತ್ತಾನೆ.

"ಸತ್ಯ ನಾ ಹೇಳಲೇ ರಾಹುಲ್ ?"

"ಸತ್ಯ ? ಹೇಳು. ಏನದು ಸತ್ಯ ?" ರಾಹುಲ್ ಮುಖ ಗಂಟು ಹಾಕಿದ.

"ಇಲ್ಲ ಹೇಳುವುದಿಲ್ಲ ಬಿಡು. ಅದರಿಂದ ನಿನಗೆ ಕೆಟ್ಟೆನಿಸಬಹುದು ನನ್ನ ಮೇಲೆ ಸುಮ್ಮನೆ ಸಿಟ್ಟು ಬರಬಹುದು"

"ಛೇ ಹೇಳಲೇಬೇಕು. ಸತ್ಯದ ಆರಾಧಕ ನಾನು' ಗೊತ್ತಿಲ್ಲವೇ? ಸಿಟ್ಟಿಗೇಳುವುದಿಲ್ಲವೆಂದು ವಚನ ಕೊಡುವೆ – ಆಯಿತಿಲ್ಲೊ ?"

"ರಾಹುಲ್, ನಿನಗೆ ಪ್ರೀತಿಯೆಂದರೇನು ಗೊತ್ತಿಲ್ಲ, ಹಾಗೂ ಪ್ರೀತಿ ಮಾಡಲು ಬೇಕಾದ ಮನೋಧರ್ಮ ನಿನ್ನಲಲ್ಲ. ನೀನು ಪ್ರೇಮಿಸುವುದೇ ಅನ್ಗತ್ಯ" (9)

ಚಂಚಲ ಮನಸ್ಸಿನ ರಾಹುಲನಿಗೆ ಇಂತಹ ಮಾತುಗಳು ರುಚಿಸದಿದ್ದರೂ ಒಪ್ಪಿಕೊಳ್ಳುತ್ತಾನೆ. ಇದೇ ಸಂದರ್ಭದಲ್ಲಿ ರಾಹುಲ್–ಮಾಧವಿ, ಅರವಿಂದ–ವೈದೇಹಿ ಮತ್ತು ರಣಜಿತ–ಶಿರೀನ್ ಎಲ್ಲರೂ ಮಹ್ ದ್ವೀಪಕ್ಕೆ ಪಿಕ್ನಿಕ್ ಪಾರ್ಟಿಗೆ ಹೊರಡುತ್ತಾರೆ. ಮಹ್ ದ್ವೀಪದಲ್ಲಿ ನಿಜವಾಗಿ ಚೈತನ್ಯದಿಂದ ಇರುವವಳೆಂದರೆ ಶಿರೀನ್ ಮಾತ್ರ. ಇನ್ನು ಮಾಧವಿ ರಾಹುಲನೊಂದಿಗಿದ್ದರೂ ಮೊದಲಷ್ಟು ಉತ್ಸಾಹವಿಲ್ಲ. ಆದರೆ ಅರವಿಂದ–ವೈದೇಹಿಯವರ ಸಂಬಂಧವಂತೂ ತೀರ ತುಂಬಿದ ಶುದ್ಧ ಪ್ರೇಮದ ಸಂಬಂಧ. ವೈದೇಹಿ ಈಗಾಗಲೇ ಮದುವೆಯಾಗಿ, ಗಂಡ ಸತ್ತು ವಿಧವೆಯಾಗಿದ್ದಾಳೆ. ಆದ್ದರಿಂದ ಅವಳೊಟ್ಟಿಗೆ 'ಸಂಸಾರ'ದ ಬಗ್ಗೆ ತುಂಬು ಅನುಭವವಿದೆ. ಹಾಗೆ ಅರವಿಂದನೂ ಕೂಡ ವೈದೇಹಿಯನ್ನು ಪ್ರೇಮಿಸಿ ಇಷ್ಟರಲ್ಲೆ ಮದುವೆಯಾಗಲಿದ್ದಾನೆ. ಮಾಧವಿಯು ಉತ್ಸಾಹದಲ್ಲಿದ್ದರು ರಾಹುಲ್ ಅನ್ಯಮನಸ್ಕನಾಗುತ್ತಾನೆ. ಈ ಸಮಯದಲ್ಲಿ ಒಂದು ಚರ್ಚೆ ನಡೆಯುತ್ತದೆ. ರಾಹುಲ್ ಎಲ್ಲರಿಗೂ ಒಂದು ತಾಸಿನವರೆಗೆ ಪ್ರತಿಯೊಬ್ಬರೂ ತಮ್ಮ ಜೋಡಿ ಬದಲಾಯಿಸಿ ತಿರುಗಾಡಿ ಬರಬೇಕು ತಾನು ವೈದೇಹಿಯವರ ಜೊತೆಗೆ

ರಣಜಿತ್ ಮಾಧವಿಯ ಜೊತೆಗೆ, ಅರವಿಂದ ಶಿರೀನ್ ಜೊತೆಗೆ ಹೋಗುವುದೆಂದು ನಿರ್ಧಾರವಾಗುತ್ತದೆ. ವೈದೇಹಿಯೊಂದಿಗೆ ಹೋದ ರಾಹುಲ ಅವಳನ್ನು ತನ್ನ ಮಾತಿನ ಬಲೆಯಲ್ಲಿ ಬೀಳಸಿ ತಾನು ಮಾಧವಿಯನ್ನು ಮದುವೆಯಾಗುವುದಿಲ್ಲವೆಂದು, ನೀವೇನಾದರೂ ಅರವಿಂದನನ್ನು ಮದುವೆಯಾಗದಿದ್ದರೆ ನಾನು ನಿಮ್ಮನ್ನು ಮದುವೆಯಾಗುತ್ತೇನೆ ನಿಮ್ಮ ಸೌಂದರ್ಯದ ಆರಾಧಕನಾಗಿದ್ದೇನೆ ಎಂದೆಲ್ಲ ಹೇಳುತ್ತಾನೆ. ಅದಕ್ಕೆ 'ಥ್ಯಾಂಕ್ಸ್' ಎಂದು ಮಾತ್ರ ಉತ್ತರ ಕೊಟ್ಟ ವೈದೇಹಿ ಅವನನ್ನು ನಯವಾಗಿಯೇ ನಿರಾಕರಿಸುತ್ತಾಳೆ.

ರಾಹುಲನ ಈ ರೀತಿಯ ನಡುವಳಿಕೆಯಿಂದ ಆತ ಯಾವ ಹೆಣ್ಣಿನ ಸಂಗದಲ್ಲೂ ತೃಪ್ತನಲ್ಲ ಎಂಬುದು ತಿಳಿಯುತ್ತದೆ. ಮಾದವಿಯ ಪ್ರಭಾವದಿಂದ ರಾಹುಲ ಬಿಡಿಸಿಕೊಂಡರು ಮುಂದೆ ಕುಂದಾಳ ದೇಹ ಸೌಂದರ್ಯಕ್ಕೆ ಮಾರುಹೋಗಿ ಅವಳನ್ನು ಮದುವೆಯಾಗುತ್ತಾನೆ. ಮಾಂಶಿಯ ಈ ಯೋಜನೆ ಮದುವೆಯಾದ ನಂತರ ತಿಳಿದು ಮಾಂಶಿಯ ಬಲೆಗೆ ಬಿದ್ದೆನಲ್ಲ ಎಂದು ಕಸಿವಿಸಿಗೊಳ್ಳುತ್ತಾನೆ. ಆದರೆ ಕುಂದಾಳನ್ನು ಸಂಪೂರ್ಣವಾಗಿ ಪ್ರೀತಿಸದೆ, ಅವನ ಆಫೀಸ್‌ನ ಛಾಯಳ ಕಡೆಗೆ ಒಲವು ಬೆಳೆಸಿಕೊಳ್ಳುತ್ತಾನೆ. ಇದೇ ಸಂದರ್ಭದಲ್ಲಿ ರಣಜಿತನ ಸಾವಾಗುತ್ತದೆ. ಪ್ರೊ॥ ವಿಲಿಯಮ್ಸ್ ಪಾರ್ಟಿಯೊಂದರಲ್ಲಿ ಈ ವಿಷಯ ತಿಳಿಸುತ್ತಾರೆ. ಇದರಿಂದ ಹೆಚ್ಚಿನ ಶಾಕ್‌ಗೆ ಒಳಗಾದ ರಾಹುಲ್ ಚಡಪಡಿಸುತ್ತಾನೆ. ಪೋಲೀಸ್ ವಿಚಾರಣೆಗೆಂದು ಪೋಲೀಸರು ರಾಹುಲ್‌ನನ್ನು ಸಂಪರ್ಕಿಸಲಾಗಿ ಗುಂಡೇಟಿನಿಂದ ಕೊಲೆಯಾದ 'ರಣಜಿತ'ನ ಸಾವಿನ ಹಿಂದೆ ರಾಹುಲ್ ಇರಬಹುದೇ? ಎಂಬ ಅನುಮಾನ ಪೋಲೀಸರನ್ನು ಕಾಡುತ್ತದೆ. ಆದರೆ ಕುಂದಾಳ ತಂದೆ ಈ ಚಕ್ರವ್ಯೂಹದಿಂದ ರಾಹುಲ್‌ನನ್ನು ಬಿಡಿಸುತ್ತಾರೆ. ಇದರಿಂದ ಕ್ಷೋಭೆಗೊಳಗಾದ ರಾಹುಲ್ ಕುಂದಾಳನ್ನು ಬಿಟ್ಟು ಇಂಗ್ಲೇಂಡ್‌ಗೆ ಹಾರಲು ಸಜ್ಜಾಗುತ್ತಾನೆ. "ಒಮ್ಮೆ ವಿಮಾನದಲ್ಲಿ ಕುಳತರೆ ಸಾಕು ಎಂದೆನಿಸಿಬಿಟ್ಟಿದೆ. ಈ ಎಲ್ಲಾ ಗಲಾಟೆಯಿಂದ ಎಲ್ಲ ಬಂಧನಗಳಂದ – ಮುಕ್ತಿ ಪಡೆಯುವ ಆ ಕ್ಷಣಕ್ಕಾಗಿ – ವಿಮಾನ ಆಕಾಶದಲ್ಲಿ ಉತ್ಕ್ಷೇಪಗೊಳ್ಳುವ ಆ ಕ್ಷಣಕ್ಕಾಗಿ ರಾಹುಲನ ಜೀವ ಕಾತರಿಸಿ ನಿಂತಿದೆ. ಸಿಧ್ಧತೆಯೆಲ್ಲ ಮುಗಿದಿದೆ. ಇನ್ನು ಬರೀ ನಿರೀಕ್ಷೆ. [10] ಹಾರುವ ಮುನ್ನ ಒಂದು ಪತ್ರ ಬರೆದಿಟ್ಟು ಅದನ್ನು ಕುಂದಾಗೆ ಕೊಡುತ್ತಾನೆ. ಕುಂದಾ ಅದನ್ನೋದಿ ಸಾಯಲು ಮುಂದಾಗುತ್ತಾಳೆ. ಅದನ್ನು ತಡೆದ ರಾಹುಲ್ ಅವಳನ್ನು ಸಮಾಧಾನ ಪಡಿಸುತ್ತಾನೆ. ಇದಕ್ಕೂ ಮುನ್ನ ಅರವಿಂದನೊಡನೆ ಮಾತನಾಡುತ್ತ ತನ್ನ ಮನದಾಳದ ವಿಚಾರವನ್ನು ಅರಹುತ್ತಾನೆ. ಅದಕ್ಕೆ ಅರವಿಂದ ಕೋಪಗೊಂಡು

"ಹಾಗಾದರೆ ಹಿಮಾಲಯಕ್ಕೆ ಹೋಗಬಹುದಲ್ಲ"

"ಹಿಮಾಲಯಕ್ಕೆ ಹೋಗಿ ಇರುವಂಥ ದೃಷ್ಟಿ ನನ್ನಲ್ಲಿಲ್ಲ – ಅಂಥ ಜೀವನ ಮಾರ್ಗಕ್ಕೆ ಯೋಗ್ಯವಾದ ಟ್ರೇನಿಂಗ್ ನನ್ನಲ್ಲಿಲ್ಲ, ಶ್ರದ್ಧೆಯಲ್ಲಿ ವಿಶ್ವಾಸವಿಲ್ಲ... ನಾನು ನಿಜವಾಗಿಯೂ ಯಾರು ಗೊತ್ತೆ ? ಜಿಪ್ಸಿ – ಊರಿಂದ ಊರಿಗೆ, ದೇಶದಿಂದ ದೇಶಕ್ಕೆ, ಸಂಸ್ಕೃತಿಯಿಂದ ಸಂಸ್ಕೃತಿಗೆ, ಹೆಣ್ಣಿನಿಂದ ಹೆಣ್ಣಿಗೆ ತಿರುಗುವ ಜಿಪ್ಸಿ ನಾನು. ನನಗೆ ಬೇರೆಂಬುದಿಲ್ಲ ನೋಡು – ಅದಕ್ಕೆ ಹೃದಯವೂ ಇಲ್ಲ – ನನಗೆ ತಳವಿಲ್ಲ – ಬುಡವಿಲ್ಲ... ಹಾಗೆ ಚಕ್ರದಂತೆ ದಿಕ್ಕು ಕಂಡು ಕಡೆಗೆ ಉರುಳುವುದೇ ನನ್ನ ಆತ್ಮದ ನಿಯಮವಿದ್ದಂತೆ ತೋರುವುದು, ಕ್ಷಮಿಸು ಏನೇನೋ ಬಡಬಡಿಸುತ್ತಿರುವೆ... ನಿನ್ನ ರಿಜಿಸ್ಟರ್ಡ್ ಲಗ್ನದ ಸಮಾರಂಭಕ್ಕೆ ನಾನು ಬರಲಿಲ್ಲ ಕ್ಷಮಿಸಬೇಕು. ನನಗೇಕೋ ಅಸೂಯೆ–ನೀನು–ವೈದೇಹಿ ಅಂಥ ಸಂಬಂಧ ನನಗೆ ಸಾಧ್ಯವಿಲ್ಲ ಎಂಬ ಮತ್ಸರ..."(11) ಈ ರೀತಿ ತನ್ನ ಮನವನ್ನು ತೆರೆದಿಟ್ಟು ಹೊರಡುತ್ತಾನೆ. ಈ ಕಾದಂಬರಿಯ ಮೂರು ಗಂಡು ಹೆಣ್ಣುಗಳ ಸಂಬಂಧದಲ್ಲಿ ರಣಜಿತ–ಶಿರೀನ್ ಮದುವೆಯಾಗದೆ ಹಾಗೆ ಉಳಿಯುತ್ತಾರೆ ಆದರೆ ರಣಜಿತ ಸಾಯುತ್ತಾನೆ. ರಾಹುಲ್–ಕುಂದ ಮದುವೆಯಾಗಿ ವಿಚ್ಛೇದನವಿಲ್ಲದೆ ಬೇರ್ಪಡುತ್ತಾರೆ. ಆದರೆ ಅರವಿಂದ–ವೈದೇಹಿಯರು ಮಾತ್ರ ಮಾದರಿ ಗಂಡು–ಹೆಣ್ಣುಗಳಾಗಿ ಆಕರ್ಷಣೆಯಿಲ್ಲದ, ಒತ್ತಡವಿಲ್ಲದ ಶುದ್ಧ ಪ್ರೇಮದ ಜೊತೆಗಾರರಾಗಿ ಉಳಿಯುತ್ತಾರೆ.

**ಸೃಷ್ಟಿ** ಕಾದಂಬರಿಯು ಶಾಂತಿನಾಥ ದೇಸಾಯಿ ಅವರ ಮೂರನೇ ಕಾದಂಬರಿ. ಈ ಕಾದಂಬರಿಯು ಓದುಗರಲ್ಲಿ ಎರಡು ರೀತಿಯ ಅನುಭವಗಳನ್ನು ಕೊಡುತ್ತದೆ. ಕಾದಂಬರಿಕಾರ ಇಲ್ಲಿ ತನ್ನ ಊಹೆ, ಕಲ್ಪನೆಯಂತೆ ಎರಡು ಕತೆಗಳನ್ನು ಬರೆದು ಪಾತ್ರಗಳನ್ನು ಹಾಗೆ ಇಟ್ಟು ಎರಡೂ ಕತೆಯಲ್ಲಿಯೂ ಸಂಬಂಧಗಳ ಬೆಸುಗೆಗೆ ಮುಂದಾಗುತ್ತಾನೆ. ಮೊದಲ ಭಾಗದಲ್ಲಿ ಸುರೇಶ, ದೇವಧರ್ ಮತ್ತು ಶಕುಂತಲೆಯ ಪಾತ್ರ ಬರುತ್ತದೆ. ಶಕುಂತಲೆಗೆ ದೇವಧರ್ ಮೇಲೆ ಒಲವಿದೆ. ಒಮ್ಮೆ ದೇವಧರ್ ಮನೆಗೆ ಆಕೆ ಬಂದಾಗ ಪಕ್ಕದ ಮನೆಯ 'ಜಮುನಾ ಬೆನ್' ಬಂದು ದೇವಧರ್‌ನನ್ನು ಮಾತನಾಡಿಸಿ ಹೋಗುತ್ತಾಳೆ. ಇದರಿಂದ ಕಸಿವಿಸಿಗೊಂಡ ಶಕುಂತಲ ಆಕೆ ಯಾರೆಂದು ದೇವಧರ್‌ನನ್ನು ವಿಚಾರಿಸುತ್ತಾಳೆ. ದೇವಧರ್ ಒಬ್ಬ ಉಪನ್ಯಾಸಕ–ನಾಗಿದ್ದು ಶಕುಂತಲೆ ಅವನ ವಿದ್ಯಾರ್ಥಿನಿಯಾಗಿದ್ದಾಳೆ. ಆ ಗೌರವವನ್ನು ಬಿಟ್ಟು ಸಂಶಯಾಕುಲಿತೆಯಾಗಿ ಪ್ರಶ್ನೆ ಕೇಳುತ್ತಾಳೆ. ದೇವಧರ್ ನಿಜ ಹೇಳಿದರೂ ನಂಬುವ ಸ್ಥಿತಿಯಲ್ಲಿ ಶಕುಂತಲೆ ಇಲ್ಲ.

ಶಕುಂತಲೆಯು ದೇವಧರ್‌ನ ಸ್ನೇಹಿತ ಭಾಟಿಯಾ ಮೂಲಕ ಜಮುನಾ ಬೆನ್ ಬಗ್ಗೆ ತಿಳಿದಿದ್ದಾಳೆ. "ಸರ್ ಭಾಟಿಯಾ ನನಗೆಲ್ಲ ಹೇಳಿದ್ದಾನೆ" ಅವಳ ಮಾತು

ದೇವಧರ್‌ನ ಎದೆಯೊಳಗೆ ಬಗೆದಂತೆ ಇಳಿಯಿತು. ಕೂಡಲೇ "ಏನಂತ ಹೇಳ್ಯಾನ ?" ಎಂದು ಅತ್ಯಂತ ಬಿರುಸಾಗಿ ಕೇಳಿದ. ಏನಿಲ್ಲ ಸಾರ್ ! ನೀವು – ನೀವು ಲಗ್ನ – ಲಗ್ನ ಮಾಡಿಕೊಳ್ಳೊದಿಲ್ಲಂತ". "ಗೊತ್ತಾತ ಬಿಡು ಅವ ಬಂದಾಗ ಜಮುನ ಇಲ್ಲಿ ಇರ್ತಾಳಂತ ಹೌದಲ್ಲೊ ? ಇರಲಿ ಮೊದಲು ನೀನು ಚೆನ್ನಾಗಿ ಅಭ್ಯಾಸ ಮಾಡು ಬಿ.ಎ.ದಲ್ಲಿ ಫರ್ಸ್ಟ್ ಕ್ಲಾಸ್ ಬರಬೇಕು. ಆನಂತರ ಲಗ್ನ–ಗಿಗ್ನದ ವಿಚಾರ ಮಾಡೋಣಂತ" "ತಿಳೀತು ಬಿಡ್ರಿ ಆದರ ಇಷ್ಟ–ಸುಮ್ನ–ಸುಮ್ನ ನನಗೆ ಆಶಾ ಹಚ್ಚಿ ಕೂಡ್ರಿಸಿದಿರಿ" ಶಕುಂತಲೆಯ ಕಣ್ಣಲ್ಲಿ ನೀರು ಚಿಮ್ಮಿದವು. "ಆಗಾ ? ನಾನೆಲ್ಲಿ ನಿನಗೆ ಹೇಳೀನಿ – ನಿನ್ನ ಮ್ಯಾಲ – ನಿನ್ನನ್ನ – ಲಗ್ನ..." ದೇವಧರ್ ಸ್ವಲ್ಪ ಗೊಂದಲಿಸಿದ. "ಬಾಯಿಂದ ನೀವು ಏನೂ ಹೇಳಿಲ್ಲ ಖರೆ. ಆದರ, ನಿಮ್ಮ ಮಾತಿನ ರೀತಿ, ನೀವು ನೋಡೊ ರೀತಿ, ನೀವು ತೋರಿಸೋ ಆಸ್ಥೆ – ಇವೆಲ್ಲ ಹಾಂಗಾದರ ಬರೀ ನಾಟಕೀಯ ಸಂಗತಿ ಆಗಿದ್ದವೇನು ? [12]

ದೇವಧರ್ ವಿದ್ಯಾರ್ಥಿನಿಯಾದ ಶಕುಂತಲೆಯನ್ನು ಪ್ರೀತಿಯಿಂದ ಮಾತನಾಡಿಸಿದರೂ ಅವನ ಆಸ್ಥೆ ಬೇರೆಯೇ ಇದೆ ಶಕುಂತಲೆಯು ಗುರುವಾದ ದೇವಧರ್‌ನನ್ನು ಇಷ್ಟಪಟ್ಟು ಆತ ಜಮುನ ಬೆನ್ ಜೊತೆಗೆ ಸಖ್ಯ ಬೆಳೆದಿದೆ ಎಂದು ತಿಳಿದು ಹೆಣ್ಣಿನ ಸಹಜ ಗುಣವಾದ ಅಸೂಯೆಯನ್ನು ವ್ಯಕ್ತಪಡಿಸುತ್ತಾಳೆ ದೇವಧರ್ ನನ್ನ ನಿನ್ನ ನಡುವಿನ ಸಂಬಂಧ ಕೇವಲ ಗುರು–ಶಿಷ್ಯೆಯ ಸಂಬಂಧ ಎಂದು ಮನವರಿಕೆ ಮಾಡಿಕೊಟ್ಟರೂ ಕೇಳದೆ ದುಃಖಿಸುತ್ತಾಳೆ. ಕಡೆಗೆ ದೇವಧರ್– "ಶಕುಂತಲಾ ಇದೇನಿದು ? ನನಗನಿಸಿತ್ತು ನೀನು ಧೈರ್ಯದಿಂದ ಎಲ್ಲಾನೂ ಸಹಿಸೋ ಹುಡುಗಿ ಅಂತ. ನನ್ನದೇನು ಸ್ವಲ್ಪ ತಪ್ಪಾಗಿರಬೇಕು ಅದಕ್ಕಾಗಿ ನನ್ನನ್ನು ಕ್ಷಮಿಸಬೇಕು ಪ್ಲೀಜ್ ಮುಂದೆಂದಾದರೂ ನಾನು ಲಗ್ನ ಆಗೋ ವಿಚಾರ ಮಾಡಿದರ ಆಗ "______" ಶಕುಂತಲೆ ಏನೋ ಹೇಳಬೇಕೆಂದವಳು ಹೇಳದೆ ಮೇಲಕ್ಕೆದ್ದು ಬಾಗಿಲಿನತ್ತ ನಡೆದಳು. "ಶಕುಂತಲ, ಪ್ಲೀಜ್ ಕ್ಷಮಿಸು, ನೀನು ನಿಜಕ್ಕೂ ಒಳ್ಳೆ ಹುಡುಗಿ ನಾನು–ನಾ–ನಾ–ಹೋಣೆಗೇಡಿ–ಬೇಕಾದರ ಘಟಿಂಗ ಅನ್ನು. ನಿನ್ನಲ್ಲಿ ನನ್ನ ಬಗ್ಗೆ ಪ್ರೀತಿ ಭಾವನೆ ಹುಟ್ಟೋ ಹಾಂಗ ನಡಕೊಂಡು ಈಗ ಜಾರಿಕೊತಿದೀನಿ. ನನ್ನ ಜೀವನದಾಗ ಹಿಂಗ್ಯಾಕಾಗ್ತದೋ ನಾ ಕಾಣೆ. ನಾ ಹುಟ್ಟಿಸಿದಷ್ಟು ತಪ್ಪು ತಿಳುವಳಿಕೆ ಮತ್ತ್ಯಾರೂ ಹುಟ್ಟಿಸಿರಲಿಕ್ಕಿಲ್ಲ." [13]

ಈ ರೀತಿ ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡ ದೇವಧರ್ ಅವಳನ್ನು ಬಿಡುತ್ತಾನೆ. ಇದೇ ಸಂದರ್ಭದಲ್ಲಿ ಅಮೆರಿಕಾಗೆ ತೆರಳಿದ ದೇವಧರ್ ಗ್ಲೋರಿಯಾನ–ಳನ್ನು ಇಷ್ಟಪಡುತ್ತಾನೆ. ಗ್ಲೋರಿಯಾನ ಭಾರತೀಯ ಸೆಂಟಿಮೆಂಟಲ್ ಗುಣವನ್ನು

ಟೀಕಿಸುತ್ತಾಳೆ. ಆದರೆ ಅದಕ್ಕೆ ವಿಚಲಿತನಾಗದ ದೇವಧರ್ ಅವಳನ್ನು ಪ್ರೀತಿಸುತ್ತಾನೆಯೇ ಹೊರತು ಮದುವೆಯಾಗಲಾರ ಅವಳ ಸಹಾಯದಿಂದಲೇ ಪಿಹೆಚ್.ಡಿ. ಆಗಿದ್ದು ಎಂದು ದೇವಧರ್ ಹೇಳಿದರು ಅದನ್ನು ಅವಳು ಒಪ್ಪುವುದಿಲ್ಲ. ಆದರೂ ಅವಳಿಗೆ ದೇವಧರ್‌ನನ್ನು ಕಂಡರೆ ಪ್ರೀತಿ ಇದೆ ಒಂದು ರೀತಿಯ 'ಲೀವ್ ಟುಗೇದರ್' (ಜೊತೆಯಾಗಿ ಜೀವಿಸುವುದು) ರೀತಿಯ ಜೀವನಕ್ಕೆ ಇಬ್ಬರು ಒಗ್ಗಿದ್ದಾರೆ.

ಸುರೇಶ–ಗೌರಿಯರ ಸಂಬಂಧ ಇಲ್ಲಿ ಇನ್ನೊಂದು ಆಯಾಮವನ್ನು ಕೊಡುತ್ತದೆ. ಸುರೇಶ ಬಡತನದಲ್ಲಿ ಬೆಳೆದರು ಬುದ್ಧಿವಂತನಾಗಿ ಶ್ರೀಮಂತ–ನಾಗುತ್ತಾನೆ. ಹಾಗೆ ಗೌರಿಯನ್ನು ಪ್ರೀತಿಸುತ್ತಾನೆ. ಪ್ರೀತಿಯಿಂದಾಗಿ ಗೌರಿ ಗರ್ಭಿಣಿಯಾಗಿದ್ದಾಳೆ. ಈ ವಿಷಯ ತಿಳಿದ ಸುರೇಶ ಹಾರಿಕೆಯ ಉತ್ತರ ಕೊಟ್ಟು ಅದನ್ನು ತೆಗೆಸಿಬಿಡುವಂತೆ ಹೇಳುತ್ತಾನೆ. ಇಲ್ಲಿ ಸುರೇಶನ ಸಮಯ ಸಾಧಕತನ, ಕಳ್ಳಾಟ ಎಲ್ಲವೂ ಚಿತ್ರಿತವಾಗಿವೆ. ಗೌರಿ ಎಂಬ ಸಾಮಾನ್ಯ ಕುಟುಂಬದ ಹೆಣ್ಣು ಹೇಗೆ ಶ್ರೀಮಂತರ ಬಲಿಪಶುಗಳಾಗುತ್ತಾರೆ ಎಂಬುದು ಇದರ ಸಾರಾಂಶವಾಗುತ್ತದೆ.

ಕಾದಂಬರಿಕಾರ ಈ ಸಂದರ್ಭದಲ್ಲಿ ಕತೆಗೆ ವಿಚಿತ್ರವೆನ್ನುವ ತಿರುವು ಕೊಡುತ್ತಾನೆ. ಪಾತ್ರಗಳು ಮತ್ತು ಹೆಸರುಗಳು ಅವೇ ಆದರೂ ಪರಿಸರ ಮಾತ್ರ ಬದಲಾಗಿದೆ. ಪರಿಸರದಂತೆ ಮಾನವನು ಬದಲಾಗುತ್ತಾನೆ ಎಂಬ ನಿಯಮದಂತೆ ಇಲ್ಲಿ ಬದಲಾವಣೆ ಕಂಡುಬಂದಿದೆ.

ಕಾದಂಬರಿಯ ಎರಡನೆ ಆಯಾಮದಲ್ಲಿ ಪಾತ್ರಗಳು ಅವೇ ಹೆಸರಿನಿಂದ ಬಂದು ನಿಲ್ಲುತ್ತವೆ. ಆದರೆ ಪರಿಸರ ಮಾತ್ರ ಬೇರೆ ಇದೆ ಕಾದಂಬರಿಕಾರ ಮತ್ತು ಓದುಗ ಇಬ್ಬರು ಚರ್ಚಿಸಿ ಎರಡನೆ ಆಯಾಮವನ್ನು ಕಾದಂಬರಿಕಾರ ಕೆಳಗಿನಂತೆ ಚಿತ್ರಿಸುತ್ತಾನೆ.

ಕೃಷ್ಣಪುರ ಎಂಬ ಊರಿನಲ್ಲಿ ಡಾ॥ ಬಿ.ಎಸ್. ದೇವಧರ್, ಎಂ.ಬಿ.ಬಿ.ಎಸ್. ಮಾಡಿ ಡಾಕ್ಟರರಾಗಿದ್ದಾನೆ. ಇಲ್ಲಿಯೂ ಸುರೇಶ ಬರುತ್ತಾನೆ. ಗೌರಿಯೂ ಬರುತ್ತಾಳೆ. ಈ ಕಥಾಭಾಗದಲ್ಲಿ ಸುರೇಶನಿಗೆ ಶಕುಂತಲೆಯೊಂದಿಗೆ ಮದುವೆಯಾಗಿದೆ. ಆದರೆ ಶಕುಂತಲೆ ಟಿ.ಬಿ.ಯಿಂದ ನರಳುತ್ತಿದ್ದಾಳೆ. ಅವಳನ್ನು ನೋಡಿಕೊಳ್ಳಲು ಡಾ॥ ದೇವಧರ್ ಕುಟುಂಬ ವೈದ್ಯನಾಗಿ ಬರುತ್ತಾನೆ. ಆದರೆ ಸುರೇಶ ಇಲ್ಲಿ ಶ್ರೀಮಂತ ರಾಜಕಾರಣಿ ಮತ್ತು ಬಿಸಿನೆಸ್‌ಮನ್ (ವ್ಯಾಪಾರಸ್ಥ). ಶಕುಂತಲೆಗೂ – ಗೌರಿಗೂ ಸ್ನೇಹವಿದೆ ಶಕುಂತಲೆಯನ್ನು ನೋಡಲು ಆಗಾಗ ಬರುವ ಗೌರಿ ಸುರೇಶನ ಕಣ್ಣಿಗೆ

ಬಿದ್ದಿದ್ದಾಳೆ. ಪರಿಚಯದ ನಂತರ ಇದ್ದಕ್ಕಿದ್ದಂತೆ ಇಬ್ಬರಿಗೂ ಪ್ರೇಮಾಂಕುರವಾಗಿ, ಗೌರಿ ಈಗ ಗರ್ಭಿಣಿಯಾಗಿದ್ದಾಳೆ. ಸಾಮಂತ ಮಾಮ ಗೌರಿಯ ತಂದೆ, ದೇವಧರ್‌ನನ್ನು ಸಂಪರ್ಕಿಸಿ ಗೌರಿಯ ಸ್ಥಿತಿಯ ಬಗ್ಗೆ ವಿವರಿಸಿ ಅಬಾರ್ಷನ್ ಮಾಡುವಂತೆ ಕೇಳಿಕೊಳ್ಳುತ್ತಾರೆ. ಇದಕ್ಕೆ ಒಪ್ಪದ ದೇವಧರ್ ತಾನು ಸುರೇಶನೊಂದಿಗೆ ಮಾತನಾಡುವುದಾಗಿ ಹೇಳುತ್ತಾನೆ. ಈ ಸಮಯದಲ್ಲೆ ಸುರೇಶನ ಹೆಂಡತಿ ಶಾಕುಂತಲೆಗೆ ದೇವಧರ್‌ನ ಮೇಲೆ ಪ್ರೀತಿ ಬೆಳೆದಿದೆ ದೇವಧರ್ ಅವಳನ್ನು ಪರೀಕ್ಷಿಸಲು ಬಂದನೆಂದರೆ ಅವಳು ಹಸನ್ಮುಖಳಾಗುತ್ತಾಳೆ. ಗೌರಿಯ ವಿಚಾರ ತಿಳಿದ ದೇವಧರ್ ಸುರೇಶನೊಂದಿಗೆ ಮಾತನಾಡುತ್ತಾನೆ. ಆದರೆ ಸುರೇಶ ಸಾವಕಾಶವಾಗಿ ಈ ತಪ್ಪು ತನ್ನಿಂದಲೇ ಆಗಿರುವುದು, ಆದ್ದರಿಂದ ಅದಕ್ಕೆ ಪರಿಹಾರ ವಾಗಿ ಏನು ಮಾಡಲು ಸಿದ್ಧವಿರುವುದಾಗಿ ಹೇಳುತ್ತಾನೆ.

ಕಡೆಗೆ ದೇವಧರ್ ಗೌರಿಯನ್ನು ಬೇರೆಡೆಗೆ ಸಾಗಿಸಿ ಅಬಾರ್ಷನ್ ಮಾಡಡದೆ (ತನ್ನ ತಾಯಿಗೂ ತಿಳಿಯದಂತೆ) ಮಗು ಹುಟ್ಟುವಂತೆ ಮಾಡುತ್ತಾನೆ. ಗೌರಿ ಅದಕ್ಕೆ 'ಅಂಕುರ' ಎಂದು ಹೆಸರಿಡುತ್ತಾಳೆ. ಅವಳು ಬರೆದ ಒಂದು ಪತ್ರದಲ್ಲಿ "ಎಲ್ಲಿಂದ ಎಲ್ಲಿಗೋ ಬಂದಿದ್ದೇನೆ... ಸುರೇಶ ನನ್ನ ದೇಹದಲ್ಲಿ ಒಂದು ಬೀಜ ಬಿತ್ತಿದ ನಂತರ ದೇವಧರ್ ನನ್ನ ಮಿದುಳಿನಲ್ಲಿ ಇನ್ನೊಂದು ಬೀಜ ಬಿತ್ತಿದ. ಅವೆರಡರ ಪರಿಣಾಮವಾಗಿ ನಾನು ಎಲ್ಲಿಂದ ಎಲ್ಲಿಗೋ ಬಂದಿದ್ದೇನೆ. ಇಬ್ಬರೂ ನನ್ನ ಮೇಲೆ ಬಲಾತ್ಕಾರ ಮಾಡಿದರೆ ? ಅಥವಾ ನಾನು ನನ್ನ ಅಸ್ಪಷ್ಟ ಸುಪ್ತ ಹಂಬಲಗಳಿಗಾಗಿ ಅವರನ್ನು ಉಪಯೋಗಿಸಿಕೊಂಡೆನೆ ? ಯಾರಿಗೆ ಗೊತ್ತು.[14] "ನನಗೆ ಜೀವನದ ಬಗ್ಗೆ ವಿಚಿತ್ರ ರೀತಿಯ ವಸ್ತು ನಿಷ್ಠತೆ ಬಂದಿದೆ. ಗಂಡಸರೆಲ್ಲ ಒಂದು ಬಗೆಯ ಆಟಿಕೆಗಳು, ಸೂತ್ರದ ಗೊಂಬೆಗಳು ಎಂದು ಒಮ್ಮೊಮ್ಮೆ ಅನಿಸುತ್ತದೆ – ಆದರೆ ನಮ್ಮಲ್ಲಿ ಜಾಣ್ಮೆ, ತಾಳ್ಮೆ ನಿಯಂತ್ರಣವಿದ್ದರೆ ಮಾತ್ರ ! ಒಮ್ಮೆ ಅವರ ಕೈಯಲ್ಲಿ ಸಿಕ್ಕೆವೋ ಮುಗಿಯಿತು – ನಾವು ಆಜನ್ಮ ದಾಸಿಗಳಾಗ ಬೇಕಾಗುತ್ತದೆ.[15] ಈ ರೀತಿ ಗೌರಿ ಯೋಚಿಸುತ್ತಾಳೆ. ಮತ್ತು ಈ ಎಲ್ಲ ಅವಘಡಗಳಿಗೂ ನನ್ನ ದುರ್ಬಲತೆಯೇ ಕಾರಣ ಎಂದು ತೀರ್ಮಾನಿಸುತ್ತಾಳೆ.

ದೇವಧರ ಶಕುಂತಲೆಯವರ ಸಂಬಂಧವು ನಿಧಾನವಾಗಿ ಬಲವಾಗುತ್ತ ಬಂದಿದೆ. ದೇವಧರ್ ಘಟಪ್ರಬಾದ ಮಿಷನ್ ಹಾಸ್ಪಿಟಲ್‌ಗೆ ವರ್ಗವಾಗುತ್ತಾನೆ. ಅಲ್ಲಿಗೆ ಶಕುಂತಲೆಯನ್ನು ಅಡ್ಮಿಟ್ ಮಾಡಿಸುತ್ತಾನೆ. ಅಲ್ಲಿ ಅವಳನ್ನು ಚೆನ್ನಾಗಿ ನೋಡಿಕೊಳ್ಳುತ್ತಾ "ಶಕುಂತಲಾ, ನಿನ್ನಲ್ಲಿ ಹೊಸ ಚೈತನ್ಯ, ಹೊಸ ಜೀವನ ನಿರ್ಮಿಸೋದು ನನ್ನ ಉದ್ದೇಶ ಮೃತ್ಯು ಮುಖವಾಗಿ ನಡೆದ ನಿನ್ನ ಜೀವನಕ್ಕೆ

ಅಣೆಕಟ್ಟು ಹಾಕಿ, ಈಗ ಅದಕ್ಕೆ ಒಂದು ಹೊಸ ಸೃಜನ ಶಕ್ತಿ ಕೊಡೋ ಪ್ರಯತ್ನ ನಾ ಮಾಡಲಿಕ್ಕೆ ಹತ್ತೀನಿ.[16]

ಈ ರೀತಿ ಶಕುಂತಲೆಗೆ ಸಮಾಧಾನ ಮಾಡುತ್ತಲೆ ಅವಳಲ್ಲಿ ಆತ್ಮ ವಿಶ್ವಾಸ ತುಂಬಲು ಪ್ರಯತ್ನಿಸುತ್ತಾನೆ. ಇದೇ ಸಂದರ್ಭದಲ್ಲಿ ಒಂದು ದಿನ ಘಟಪ್ರಭೆಯ ಸೌಂದರ್ಯವನ್ನು ನೋಡಲು ಇಬ್ಬರೂ ಹೋಗುತ್ತಾರೆ. ಚಳಿ ಹೆಚ್ಚಾಗಿದ್ದುದರಿಂದ, ಗೆಸ್ಟ್ ಹೌಸ್‌ಗೆ ಮರಳುತ್ತಾರೆ. ಆದರೆ ಗೆಸ್ಟ್ ಹೌಸ್‌ನ ಮತ್ತೊಂದು ರೂಮಿನ ಎದುರಿಗೆ ಕತ್ತಲಲ್ಲಿ ಯಾರೋ ವ್ಯಕ್ತಿಯೊಬ್ಬ ನಿಂತಿರುವಂತೆ ಕಾಣುತ್ತದೆ. ಆತ ಇವರಿಬ್ಬರು ತಬ್ಬಿಕೊಂಡು ಬರುತ್ತಿರುವುದನ್ನು ನೋಡಿ ಕೋಣೆಗೆ ಹೋಗಿ ಬಾಗಿಲು ಹಾಕಿಕೊಳ್ಳುತ್ತಾನೆ. ಇದನ್ನು ನೋಡಿದ ಶಕುಂತಲೆ ತಕ್ಷಣ ದೇವಧರ್ ತೆಕ್ಕೆಯಿಂದ ಬಿಡಿಸಿಕೊಂಡು ಪಕ್ಕಕ್ಕೆ ಬರುತ್ತಾಳೆ. ಶಕುಂತಲೆಯ ಮನಸ್ಸಿನಲ್ಲಿ ಕತ್ತಲೆಯಲ್ಲಿರುವ ವ್ಯಕ್ತಿ ಯಾರೆಂಬ ಸಂಶಯ ಮೂಡುತ್ತದೆ. ಬಹುಶ: ಆ ವ್ಯಕ್ತಿ ಸುರೇಶನಿರಬಹುದು ಎಂದು ತೀರ್ಮಾನಿಸಿ ಪಕ್ಕಕ್ಕೆ ಸರಿದಿರುತ್ತಾಳೆ. ಇಬ್ಬರು ಕೋಣೆಗೆ ಹೋದ ನಂತರ ದೇವಧರ್ ಮತ್ತೆ ಹೊರಗೆ ಬಂದು ವಾಚ್‌ಮನ್‌ನನ್ನು ವಿಚಾರಿಸುತ್ತಾನೆ. ಯಾರೋ ಸಾಹೇಬರು ಗೋಕಾಕಕ್ಕೆ ಹೋಗಿದ್ದವರು ಬರುವಾಗ ರಾತ್ರಿಯಾಯಿತೆಂದು ತಂಗಲು ಬಂದಿದ್ದಾರೆ ಎಂದು ತಿಳಿದುಬರುತ್ತದೆ. ಈ ಘಟನೆಯಾದ ನಾಳೆ ಶಕುಂತಲೆ ಘಟಪ್ರಭೆಯಲ್ಲಿ ಬಿದ್ದು ಸಾಯುವುದರೊಂದಿಗೆ ಕಾದಂಬರಿ ಮುಗಿಯುತ್ತದೆ.

ಕಾದಂಬರಿಯ ಎರಡೂ ಕಥಾ ಹಂದರದಲ್ಲಿ ವಿಶಿಷ್ಟ ರೀತಿಯ ಪಾತ್ರ ಚಿತ್ರಣ ಓದುಗರ ಗಮನ ಸೆಳೆಯುತ್ತದೆ. ಈ ರೀತಿಯ ಹೊಸ ಪ್ರಯೋಗ ಮೊದಲು ಮಾಡಿದವರೇ ಶಾಂತಿನಾಥ ದೇಸಾಯಿ ಅವರು. ಗಂಡು-ಹೆಣ್ಣುಗಳ ಸೂಕ್ಷ್ಮ ಸಂಬಂಧಗಳು ಸಮಾಜದ ಯಾವ ನಿಯಮಗಳಿಗೂ ಒಗ್ಗದೆ, ಬಗ್ಗದೆ ಅದನ್ನು ಮೀರಿದ ಮನಸ್ಸು ಹೊಸತನಕ್ಕೆ ಹಾತೊರಿಯುತ್ತದೆ ಎಂಬುದನ್ನು ಸ್ಪಷ್ಟವಾಗಿ ಈ ಕಾದಂಬರಿ ದಾಖಲಿಸುತ್ತದೆ.

ಶಾಂತಿನಾಥ ದೇಸಾಯಿ ನಾಲ್ಕನೇ ಕಾದಂಬರಿ **ಸಂಬಂಧ** – ಕಾದಂಬರಿಯ ಕಥಾನಾಯಕ ಶೀತಲಕುಮಾರ. ಈತ, ಈಗಾಗಲೇ ಹಲವು ಕಾದಂಬರಿಗಳನ್ನು ಬರೆದು ಅದರಲ್ಲಿ 'ಸಂತೆಯೊಳಗೊಂದು ಮನೆ' ಕತೆ ಚಲನಚಿತ್ರವಾಗುತ್ತಿದೆ. ಈಗ ನಮ್ಮ ಕಥೆಗಾರ ಹೊಸ ಕಥೆಯ ಹುಡುಕಾಟದಲ್ಲಿ ಇದ್ದಾನೆ. ಅವನ ಸ್ನೇಹಿತ ಪ್ರೊ॥ ಪೊಮ್ಮಣ್ಣ (ಪ್ರೊ॥ ಪರಮೇಶ್ವರಯ್ಯ) ಕೊಲ್ಹಾಪುರದಲ್ಲಿದ್ದಾರೆ. ಪತ್ರದ ಮುಖೇನ ಅವರು ಪತ್ರ ಬರೆದು ಕಥೆಗಾರ ಶೀತಲಕುಮಾರರನ್ನು ಕೊಲ್ಹಾಪುರಕ್ಕೆ

ಆಹ್ವಾನಿಸುವುದರೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ. ಕಾದಂಬರಿಕಾರರಿಗೆ ಅಲ್ಲಿ ಅವರ 'ಫ್ಯಾನ್' (ಅಭಿಮಾನಿ) ರಾಧಿಕಾಳ ಪರಿಚಯವಾಗುತ್ತದೆ. ರಾಧಿಕಾ ಶ್ರೀಮಂತ ಜೈನ ಕುಟುಂಬದಲ್ಲಿ ಬೆಳೆದಿದ್ದಾಳೆ. ಅವಳ ಆಸ್ಥೆ ಇರುವುದು ತತ್ವಜ್ಞಾನದಲ್ಲಿ. ಆದರೆ ಸಾಹಿತ್ಯದಲ್ಲಿ ಅತಿಶಯವಾದ ಆಸಕ್ತಿಯಿದೆ. ಶೀತಲಕುಮಾರರನ್ನು ಭೇಟಿಯಾಗುವ ಮೊದಲೇ ಆಕೆ ಶೀತಲಕುಮಾರರ ಎಲ್ಲಾ ಕಾದಂಬರಿಗಳನ್ನು ಓದಿಕೊಂಡಿದ್ದಾಳೆ. ಶೀತಲಕುಮಾರರ ಕಾದಂಬರಿಗಳ ಕಥಾನಾಯಕ-ನಾಯಕಿಯರ ಬಗ್ಗೆ ಹಲವು ಅನುಮಾನಗಳು ರಾಧಿಕಾಳಗಿದೆ. ಆದರೆ ಶೀತಲಕುಮಾರರ ಬಗ್ಗೆ ಅಭಿಮಾನವಿದೆ.

ಈ ಕಾದಂಬರಿಯ ಪ್ರಮುಖ ಪಾತ್ರಧಾರಿ ಶೀತಲಕುಮಾರ-ರಾಧಿಕಾ-ಶೇಖರ ಹಾಗೂ ಪೊಮ್ಮಣ-ಪಾರ್ವತಿ, ಇವರ ಮಗಳಾದ ಉಮ. ಗಂಡು ಹೆಣ್ಣಿನ ಸಂಬಂಧದ ಬಗ್ಗೆ ಹೆಚ್ಚು ಗಮನ ಸೆಳೆಯುವುದು ಶೀತಲಕುಮಾರ-ರಾಧಿಕಾ ಮತ್ತು ಶೇಖರರು ಮಾತ್ರ.

ಕಾದಂಬರಿಯ ಪ್ರಾರಂಭದಲ್ಲಿ ಶೀತಲಕುಮಾರರಿಗೆ ರಾಧಿಕಾಳ ಬಗ್ಗೆ ಹಲವು ವಿಚಾರಗಳು ತಿಳಿಯುತ್ತವೆ. ರಾಧಿಕಾಗೆ ಮದುವೆಯಾಗಿದೆ. ಗಂಡ ರಮೇಶ ಈಗಾಗಲೇ ಸತ್ತಿದ್ದಾನೆ ಇವಳ ಪ್ರಿಯಕರ ಶ್ರೀಧರ ಈಕೆಯನ್ನು ಪ್ರೀತಿಸಿ ಕೈಬಿಟ್ಟಿದ್ದಾನೆ.

ಈ ಸಂದರ್ಭದಲ್ಲಿ ರಾಧಿಕಾ ಮತ್ತು ಶೀತಲಕುಮಾರರು ಕೊಲ್ಹಾಪುರದ ಸುತ್ತ-ಮುತ್ತಲಿರುವ ಪ್ರೇಕ್ಷಣೀಯ ಸ್ಥಳಗಳಿಗೆ ಪೊಮ್ಮಣ್ಣರ ಜೊತೆ ಪ್ರವಾಸ ಕೈಗೊಳ್ಳುತ್ತಾರೆ. ರಾಧಿಕಾ ಶೀತಲಕುಮಾರರ ಜೀವನದ ಬಗ್ಗೆ ಅವರ ಸಂಬಂಧಗಳ ಬಗ್ಗೆ ಕೇಳಿ ತಿಳಿದುಕೊಳ್ಳುತ್ತಾಳೆ. ಹಾಗೆ ಶೀತಲಕುಮಾರರು ಅವಳ ಸಂಬಂಧಗಳ ಬಗ್ಗೆ ಕೇಳಿ ತಿಳಿದು ಕೊಳ್ಳುತ್ತಾರೆ. ಶೀತಲಕುಮಾರರಿಗೆ ಮದುವೆಯಾಗಿದೆ ಕಮಲ ಎಂಬ ಹೆಂಡತಿಯೂ ಇದ್ದಾಳೆ. ಆದರೆ ಮಕ್ಕಳಾಗಿಲ್ಲ, ರಾಧಿಕಾಳಿಗೆ ತ್ರಿಶಾಲ ಎಂಬ ತಂಗಿ ಹಾಗೂ ಶ್ರೀಕಾಂತ ಎಂಬ ಅಣ್ಣ ಇದ್ದಾನೆ. ತ್ರಿಶಾಲ ಬಹು ಹಟಮಾರಿ ಚಿಕ್ಕವಳಿದ್ದಾಗಲೇ ಅವಳು ಅಂದುಕೊಂಡಂತೆ ಮನೆಯವರೆಲ್ಲ ನಡೆದುಕೊಳ್ಳಬೇಕು. ಇಲ್ಲದಿದ್ದರೆ ಆಕೆ ಊಟ ಮಾಡದೆ ಯಾರಿಗೂ ಹೇಳದೆ ಮನೆಯವರನ್ನೆಲ್ಲ ಆಟ ಆಡಿಸುತ್ತಿದ್ದವಳು. ತ್ರಿಶಾಲ ಬೆಳೆದ ಮೇಲೆ ರಾಧಿಕಾಗೆ ಅವಳ ಬಗ್ಗೆ ಸ್ವಲ್ಪ ಅಸೂಯೆ ಕೂಡ ಇದೆ. ಅದಕ್ಕೆ ಕಾರಣ ಆಕೆ ರಾಧಿಕಾಗಿಂತ ಸುಂದರವಾಗಿರುವುದು "ನಿನಗೆ ಆಕೀ ಸೌಂದರ್ಯದ ಬಗ್ಗೆ ಮತ್ಸರವಿತ್ತು ಹೌದಲ್ಲೋ?" 'ಇತ್ತು, ಇಲ್ಲ, ಯಾರಿಗ್ಗೊತ್ತು? ಅವಳು ಕಾಣಿಸಾಕ ಭಾಳ ಛಂದ ಅದಾಳ, ಖರೆ. ಅದರ ಹುಡುಗರು ಬೆನ್ನು ಹತ್ತುತಾರ ಅಂತ ಇಕೀನೂ ತನ್ನ ಕಂಟ್ರೋಲ್ ಯಾಕ ತಪ್ಪಬೇಕು. ಕಡೀಕ

ತೋಫಖಾನೆಯವರ ಧೋಂಡೀ ರಾಮನ ಕೈಯ್ಯಾಗ ಸಿಕ್ಕಮ್ಯಾಲಂತೂ ಆ ಲಫಂಗ ಬಿಟ್ಯಾನೇನ್ರೀ ? ಓಡಿಸಿಕೊಂಡೆ ಹೋಗಿ ಬಿಟ್ಟ. ಆಗಲೇ ನಮ್ಮ ಅಪ್ಪನಿಗೆ ಹಾರ್ಟ್ ಅಟ್ಯಾಕ್ ಬಂತು"(17)



ಇಂತಹ ಪರಿಸರದಲ್ಲಿ ಬೆಳೆದ ರಾಧಿಕಾ ಒಂದು ಗಟ್ಟಿ ಸಂಬಂಧಕ್ಕಾಗಿ ಹುಡುಕಾಡುತ್ತಿದ್ದಾಳೆ. ಬಹುಶಃ ಅವಳ ಮುಂದಿನ ಬದುಕಿನ ನಿರ್ಧಾರಗಳೆಲ್ಲ ಅವಳ ಹಿಂದಿನ ಪರಿಸರದ ಜಾಳು ಸಂಬಂಧಗಳಿಂದಲೇ ಆಗುವಂತಹವುಗಳಾಗುತ್ತವೆ. ಇಲ್ಲಿ ಶೀತಲಕುಮಾರರ ಮನಸ್ಥಿತಿಯನ್ನು ಒರೆಗೆ ಹಚ್ಚಿದರೆ ಅವನಿಗಾಗಲೇ ಮಧ್ಯವಯಸ್ಸು ಮೀರಿದೆ. ಜೊತೆಗೆ ಮದುವೆಯಾಗಿ ಏಳೆಂಟು ವರ್ಷಗಳು ಕಳೆದರು ಮಕ್ಕಳಾಗಿಲ್ಲದುದು ಒಂದು ಕೊರತೆಯಾಗಿದೆ. ಆದರೆ ಶೀತಲ ಕುಮಾರರು ಎಲ್ಲಿಯೂ ಅದನ್ನು ಕೊರತೆ ಎಂದು ಹೇಳದಿದ್ದರೂ ಮಾನವನ ಮನಸ್ಸಿನ ಸೂಕ್ಷ್ಮ ಸಂವೇದನೆಗಳು ಯಾವ ಪ್ರಭಾವ – ಪ್ರೇರಣೆಗಳಿಗೆ ಒಳಗಾಗಿ ಎತ್ತ ಓಡುತ್ತವೆ ಎಂದು ಹೇಳಲಾಗದ ಈ ಪರಿಸ್ಥಿತಿಯಲ್ಲೇ ಅವರು ರಾಧಿಕಾಳ ಬಗ್ಗೆ ಮೋಹಗೊಳ್ಳುತ್ತಾರೆ. ಅವಳನ್ನು ಸ್ವೀಕರಿಸಲು ಸಿದ್ಧರಿದ್ದಾರೆ ಆದರೆ ಇದಕ್ಕೆ ಅವರ ಹೆಂಡತಿ 'ಕಮಲ' ಒಪ್ಪುತ್ತಾಳೆಯೆ ಎಂಬುದು ತಿಳಿದಿಲ್ಲ. "ಛೇ ರಾಧಾ ನೀ ಅಂದರ ಭಾಳ" – ಏನು ಹೇಳಲು ಗೊತ್ತಾಗದೆ. "ಮಜಾ ಹುಡುಗಿ ಇದ್ದೀ ಬಿಡು. ನಿನ್ನ ಬಗ್ಗೆ ನನ್ನ ಮನಸ್ಸಿನ್ಯಲ್ಲಿ ಎಂಥ ಭಾವನೆ ಇವೆ ಅನ್ನೋದು ನಿಂಗ ಗೊತ್ತ ಅದ." "ಎಂಥಾ ಭಾವನೆ ?" ರಾದಿಕೆ ಕಣ್ಣು ದೊಡ್ಡದಾಗಿಸಿ ಕುತೂಹಲದಿಂದ ಕೇಳಿದಳು "ನಂಗೊತ್ತಿಲ್ಲ... ಬಹುಶಃ ಫ್ರೆಂಡ್ಸ್ ಇರ್ತಾರಲ್ಲ, ಅಂತಹವರ ನಡುವೆ ಇರೋ ಭಾವನೆ, ಸ್ನೇಹ..."(18)

ಈ ರೀತಿ ಸ್ನೇಹವಾಗಿ ಬೆಳೆದು ನಂತರ ಪ್ರೇಮವಾಗಿ ಬದಲಾಗುತ್ತದೆ. ಇದು ಕಾದಂಬರಿಯ ಮೊದಲ ಭಾಗದಲ್ಲಿ ಬರುವ ವಿಚಾರಗಳಾದರೆ ಅದರ ಎರಡನೇ ಭಾಗದಲ್ಲಿ ಕಥೆಯು ಹೊಸ ದಿಕ್ಕನ್ನು ಪಡೆಯುತ್ತದೆ. ಶೀತಲಕುಮಾರರು ರಾಧಿಕೆಯನ್ನು ಬೆಂಗಳೂರಿಗೆ ಕರೆದುಕೊಂಡು ಬರುತ್ತಾರೆ. ಅದಕ್ಕೆ ಕಾರಣ ಶೀತಲ ಕುಮಾರರ ಸ್ನೇಹಿತ ಶೇಖರ ಚಲನಚಿತ್ರ ನಿರ್ದೇಶಕ ಮತ್ತು ನಿರ್ಮಾಪಕ. ಶೀತಲಕುಮಾರ ರಾಧಿಕೆಯನ್ನು ತನ್ನ ಮನೆಯಲ್ಲೆ ಇಟ್ಟುಕೊಂಡಿರುತ್ತಾರೆ ಮತ್ತು ಅವಳನ್ನು ಚಲನಚಿತ್ರದಲ್ಲಿ ಅಭಿನಯಿಸುವಂತೆ ಪ್ರೇರೇಪಿಸಿ ಶೇಖರನಿಗೆ ಪರಿಚಯಿಸುತ್ತಾರೆ. ಶೇಖರ ಒಬ್ಬ ಒಳ್ಳೆಯ ನಿರ್ದೇಶಕ. ರಾಧಿಕೆಯನ್ನು ನೋಡಿದಾಕ್ಷಣ ಆಕೆಯನ್ನು ತನ್ನ ಸಿನಿಮಾದ ಮುಖ್ಯ ಪಾತ್ರಕ್ಕೆ ಆರಿಸಿಕೊಳ್ಳುತ್ತಾನೆ. ಹಾಗು ಅಭಿನಯವನ್ನು ಕಲಿಸುತ್ತಾನೆ ರಾಧಿಕೆ ಮತ್ತು ಶೇಖರರ ಓಡಾಡ ಹೆಚ್ಚಾಗುತ್ತದೆ. ಚಲನಚಿತ್ರ ತಂಡದ ಹಲವಾರು ಪಾರ್ಟಿಗಳಿಗೆ ಶೇಖರ ರಾಧಿಕೆಯನ್ನು ಕರೆದುಕೊಂಡು

ಹೋಗುತ್ತಾನೆ. ಇವರ ಸಂಬಂಧ ದೈಹಿಕ ಸಂಪರ್ಕಕ್ಕೆ ನಾಂದಿ ಹಾಡುತ್ತದೆ. ಅತ್ಯಂತ ಪ್ರಬಲವಾದ ಮನೋವೇಗದ, ಮುನ್ನುಗುವ ವ್ಯಕ್ತಿತ್ವದ ಶೇಖರನ ಈ ನಡುವಳಿಕೆ ಶೀತಲಕುಮಾರನಿಗೆ ಪೇಚಿಗೆ ಸಿಲಕಿಸುತ್ತದೆ. ಅತ್ತ ಅವಳನ್ನು ಹೋಗಬೇಡ ಎಂದು ಹೇಳಲು ಆಗದೆ ಮಾನಸಿಕ ಒತ್ತಡಕ್ಕೆ ಸಿಲುಕುತ್ತಾನೆ. ಹೀಗಿರುವಾಗಲೇ ಶೇಖರನಿಂದ ರಾಧಿಕೆ ಗರ್ಭವತಿಯಾಗುತ್ತಾಳೆ. ಇದು ಶೇಖರನಿಗೆ ತಿಳಿದು ಅದನ್ನು ತೆಗೆಸಿ ಬಿಡುವಂತೆ ರಾಧಿಕೆಗೆ ಒತ್ತಡ ಹಾಕುತ್ತಾನೆ.

ಶ್ರೀಧರ್‌ನಿಂದ ಅಬಾರ್ಷನ್ ಮಾಡಿಸಿಕೊಂಡಿದ್ದ ರಾಧಿಕೆ ಮತ್ತೊಂದು ಮಗುವನ್ನು ಅದೇ ರೀತಿ ಕಳೆದುಕೊಳ್ಳಬೇಕಲ್ಲ ಎಂದು ದು:ಖಿಸುತ್ತಾಳೆ. ಕಡೆಗೆ ಶೀತಲ ಕುಮಾರರ ಮತ್ತು ಕಮಲರ ಒತ್ತಡಕ್ಕೆ ಮಣಿದು ಒಪ್ಪಿ ಅಬಾರ್ಷನ್ ಮಾಡಿಸಿಕೊಳ್ಳುತ್ತಾಳೆ. ಆದರೆ ಅಬಾರ್ಷನ್ ಮಾಡಿಸಿಕೊಂಡ ಮರುಘಳಿಗೆಯಿಂದಲೇ ಅವಳಿಗೆ 'ಒಂದು ಮಗು' ಬೇಕಾಗಿತ್ತು ಎಂದು ಎನಿಸುತ್ತದೆ. ಅದೇ ಪ್ರಕಾರ ಆಕೆ ಶೀತಲ ಕುಮಾರ ಮತ್ತು ಕಮಲರಿಗೆ ತಿಳಿಸುತ್ತಾಳೆ. ರಾಧಿಕಾ ಮನೆಗೆ ಬಂದ ಹೊಸದರಲ್ಲಿ ತೀರ 'ಸವತಿ'ಯಂತೆ ನೋಡುತ್ತಿದ್ದ ಕಮಲಕ್ಕ ಈಗ ಸಂಪೂರ್ಣ ಬದಲಾಗಿದ್ದಾಳೆ. ಮೇಲಿನ ಘಟನೆಯಾದ ಮೇಲಂತೂ ರಾಧಿಕಾಳನ್ನು ತನ್ನ ಸ್ವಂತ ಮಗಳಂತೆ ನೋಡಿಕೊಳ್ಳುತ್ತಾಳೆ. ಒಂದು ಮಗುವನ್ನು ಪಡೆಯುವ ಹಂಬಲವನ್ನು ಶೀತಲಕುಮಾರರಿಗೆ ಹೀಗೆ ಹೇಳುತ್ತಾಳೆ.

"ನೋಡ್ರಿ, ನನಗೊಂದು ಕೂಸು ಬೇಕು". ನಾನು ಆಶ್ಚರ್ಯದಿಂದ ಥಕ್ಕಾದೆ. "ಏನೆಂದೆ ? ಕೂಸು ?" "ಹೌದು ನನಗೊಂದು ಕೂಸು ಬೇಕು. ನನ್ನ ಹೊಟ್ಟೆಯ ಕೂಸು ಹೋದಾಗಿನಿಂದ ನನ್ನ ಅಂತರಾಳದೊಳಗೆ ಕೂಸಿಗಾಗಿ ಹಂಬಲ ಬೇರೂರಿ ಬಿಟ್ಟಿದೆ" "ಹಾಂಗಿದ್ದರೆ ಡಾಕ್ಟರ್ ಕಡೆ ಯಾಕೆ ಹೋದಿ ?" "ಶೇಖರನಿಗೆ ಈ ಮಾತು ಹೇಳಿದ್ದೆ, ಅವನ ಮಗುವನ್ನು ಹೆರಲು ನಾ ಸಿದ್ಧಳಿದ್ದೆ. ಆದರೆ ಆತ ತಯಾರಾಗಲಿಲ್ಲ. ಹೋಗಲಿ ಆದದ್ದಾಯಿತೀಗ. ಅದೇನೋ ಅಂತಾರಲ್ಲ – ಮಿಂಚಿ ಹೋದ ಮಾತಿಗೆ ಇತ್ಯಾದಿ... ಈಗ ನನಗೊಂದು ಮಗು ಸಿಕ್ಕರೆ ಅದನ್ನು ಸಾಕಬೇಕಂತೀನಿ. ಯು ಸಿ, ನನ್ನ ಸುತ್ತ ನನಗೊಂದು ವರ್ತುಳ ಬೇಕಾಗೇದ. ಇಲ್ಲದಿದ್ದರೆ ಜೀವಿಸಿರೋದೆ ಕಠಿಣಾದೀತು... ಮತ್ತು ಆ ವರ್ತುಳಕ್ಕೆ ಒಂದು ಕೇಂದ್ರ ಬಿಂದು ಬೇಕಾಗೇದ, ಅದಕ್ಕೆ ನನ್ನದೇ ಆದ ಒಂದು ಮಗು ಬೇಕು. ನನ್ನದೇ ಆದ ಮಗು ಎಂದ ಕೂಡಲೇ ನನ್ನ ಹೊಟ್ಟೆಯ ಮಗುವೇ ಬೇಕು ಅಂತಲ್ಲ..."(19)

ಈ ರೀತಿ ರಾಧಿಕಾಳ ಮಾನಸಿಕ ಒತ್ತಡದ ಅಭಿವ್ಯಕ್ತಿಯಿಂದ ಕತೆ ಒಂದು ಕೊನೆಗೆ ಬಂದು ನಿಲ್ಲುತ್ತದೆ. ಶೀತಲಕುಮಾರ ಮತ್ತು ಕಮಲಕ್ಕರು ಒಂದು ವರ್ಷದ ಒಂದು ದತ್ತು ಮಗುವನ್ನು ಅವಳಿಗೆ ತಂದುಕೊಡುತ್ತಾರೆ. ಈ ನಡುವೆ ಶೇಖರನಿಗೆ ಈ ವಿಷಯ ತಿಳಿದು ರಾಧಿಕೆಗೆ ಬಾಯಿಗೆ ಬಂದಂತೆ ಬಯ್ಯುತ್ತಾನೆ. ಆದರೆ ಶೀತಲ ಕುಮಾರರು ಆತನನ್ನು ಸಮಾಧಾನ ಪಡಿಸಿ ಕಳುಹಿಸುತ್ತಾರೆ. ಸ್ವಲ್ಪ ದಿನಗಳಾದ ಮೇಲೆ ಮಗುವಿನೊಂದಿಗೆ ರಾಧಿಕಾ ಕೊಲ್ಹಾಪುರಕ್ಕೆ ತೆರಳುತ್ತಾಳೆ. "ರಾಧಿಕೆಯಿಲ್ಲದ ಮನೆ ಭಣ ಭಣವೆನಿಸತೊಡಗಿತು. ನನಗೊಬ್ಬ ಮಗಳಿದ್ದರೆ" ಎಂದು ಶೀತಲಕುಮಾರರಿಗೆ ಅನಿಸತೊಡಗಿತು. ಹೀಗೆ ರಾಧಿಕೆ ಶೀತಲಕುಮಾರರ ಮನಸ್ಸಿನ ಸುಳಿಯಲ್ಲಿ ಹಲವು ರೀತಿಯ ಸಂಬಂಧಗಳನ್ನು ಪಡೆದು ಬೆಳೆದಳು..."[20] ಒಂದು ದೃಷ್ಟಿಯಿಂದ ರಾಧಿಖ ಪುರಾಣಗಳ ಸ್ತ್ರೀಯಂತೆ ಅಗಮ್ಯಳು. ಆದರೆ, ವಿಚಿತ್ರವೆಂದರೆ ಅವಳು ಶೀತಲಕುಮಾರನಲ್ಲಿ ಬೆಳೆಸುತ್ತ ಹೋಗುವುದು ಮೃದುತ್ವವನ್ನು ಮಾತ್ರ. ಅಂದರೆ ಎಲ್ಲಾ ನೈಜ ಪ್ರೇಮಗಳ ಹಿಂದಿರುವ ಭಾವ ಅದು. "ರಾಧಿಕೆ ಮತ್ತು ಶೀತಲಕುಮಾರನ ನಡುವೆ ಬೆಳೆಯುವ ಸಂಬಂಧದ ಹಲವು ಸಾಧ್ಯತೆಗಳು ಕಾದಂಬರಿಯ ಜೀವಾಳವಾಗಿಬಿಡುತ್ತದೆ. ಗೆಳತಿ, ತಂಗಿ, ಮಗಳು, ಪ್ರೇಯಸಿ – ಏನಾದರೂ ಅವಳು ಆಗಬಹುದು". [21]

ರಾಧಿಕೆ ಕೊಲ್ಹಾಪರಕ್ಕೆ ಹೋದ ನಂತರ ತನ್ನ ಅಲ್ಲಿನ ಜೀವನದ ಬಗ್ಗೆ ಪತ್ರ ಬರೆಯುವುದರೊಂದಿಗೆ ಕಾದಂಬರಿ ಮುಗಿಯುತ್ತದೆ. ಮನೋವಿಜ್ಞಾನಿಯಾದ ಸಿಗ್ಮಂಡ್ ಫ್ರಾಯ್ಡ್‌ನ 'ಈಡಿಪಸ್' ಚಿಂತನೆಯ ಹಿನ್ನೆಲೆಯಲ್ಲಿ ಶೀತಲಕುಮಾರ ಮತ್ತು ರಾಧಿಕೆಯ **'ಸಂಬಂಧ'**ವನ್ನು ಗುರುತಿಸಬಹುದಾಗಿದೆ ಮತ್ತು ಆ ಚಿಂತನೆಯನ್ನು ಮೂಲವಾಗಿ ಇಟ್ಟುಕೊಂಡು ಶಾಂತಿನಾಥ ದೇಸಾಯಿಯವರು ಈ ಕಾದಂಬರಿ ಬರೆದಿದ್ದಾರೆ.

**'ಬೀಜ'** ಕಾದಂಬರಿ ದೇಸಾಯಿ ಅವರ ಐದನೇ ಕಾದಂಬರಿ. ಕಾದಂಬರಿಯಲ್ಲಿ ಶ್ರೇಯಾಂಸ–ಲೀಝಿ–ರೇವತಿ, ವಸಂತ ಮತ್ತು ನಿರ್ಮಲೆ, ಅಪ್ಪಸಾಹೇಬ–ಸರಸ–ಅಂಬುಜಕ್ಕ, ಕಲ್ಯಾಣಶೆಟ್ಟರು–ಪಾರ್ವತಿ ಪಾತ್ರಗಳಾಗಿ ಬಂದಿವೆ. ಅಪ್ಪಸಾಹೇಬ ಒಬ್ಬ ದೊಡ್ಡ 'ದಂಧ' ನಡೆಸುವ ವ್ಯಾಪಾರಸ್ಥ. ಕಾದಂಬರಿ ಪ್ರಾರಂಭವಾಗುವ ಮುನ್ನವೇ ಆತ ಸತ್ತಿದ್ದಾನೆ ಅವನ ಮಗನಾದ ಶ್ರೇಯಾಂಸ ತನ್ನ ತಂದೆಯೊಂದಿಗೆ ಜಗಳಾಡಿಕೊಂಡು ದೂರದ ಮುಂಬೈಗೆ ತೆರಳಿದ್ದಾನೆ. ತನ್ನ ಬುದ್ಧಿಮತ್ತೆಯ ಪ್ರಭಾವದಿಂದ ಮುಂಬೈನ **ಹೆಸ್ ಫಾರ್ಮಸ್ಯೂಟಿಕಲ್ಸ್**‌ನಲ್ಲಿ ದೊಡ್ಡ ಹುದ್ದೆಯಲ್ಲಿದ್ದಾನೆ. ಮುಂಬೈಗೆ ತೆರಳಿ 20 ವರ್ಷಗಳೇ ಸಂದಿವೆ. ಅಲ್ಲಿ ಆತ ಡಾ॥ ಪಾಲ್ಸ್‌ನ ಮಗಳು

ಲೀಝಿಯನ್ನು ಪ್ರೇಮವಿವಾಹ ಆಗಿದ್ದಾನೆ. ಅವನಿಗೆ ಕಲ್ಪನ ಎಂಬ ಮಗಳು ಇದ್ದಾಳೆ. ಮುಂಬೈನಲ್ಲಿ ಭದ್ರವಾಗಿ ಬೇರು ಬಿಟ್ಟಿರುವ ಶ್ರೇಯಾಂಸ ತಂದೆಯ ಸಾವಿನ ಸುದ್ಧಿ ತಿಳಿದು ಮತ್ತೇ ಕೃಷ್ಣಾಪುರಕ್ಕೆ ಬರುತ್ತಾನೆ. ತಂದೆಯ ಅಂತ್ಯಕ್ರಿಯೆಗೆಂದು ಆತ ಅಲ್ಲೇ ಉಳಿಯಬೇಕಾಗುತ್ತದೆ. ಆದರೆ ಕೃಷ್ಣಾಪುರದಲ್ಲಿರುವ ಮಾನವ ಸಂಬಂಧಗಳ ಪರಿಸರ ಬೇರೆಯೇ ತೆರನಾಗಿದೆ. ಅಂತ್ಯಕ್ರಿಯೆ ಮುಗಿಸಿ ಹೋಗಬೇಕೆಂದು ಬಂದ ಶ್ರೇಯಾಂಸ ನಿಧಾನವಾಗಿ ಅಲ್ಲೇ ಉಳಿಯುವಂತಹ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಕೃಷ್ಣಾಪುರದ ಮಣ್ಣಿನಲ್ಲಿ ಹೂತು ಹೋಗಿರುವ ಸಂಬಂಧಗಳ ಬೇರುಗಳು ನಿಧಾನವಾಗಿ ಅವನೊಳಗೆ ಇಳಿಯಲಾರಂಭಿಸುತ್ತವೆ. ತನ್ನ ಬಾಲ್ಯದ ಗೆಳತಿ ಹಾಗೂ ಪ್ರೇಯಸಿ 'ರೇವತಿ' ಅಲ್ಲೆ ಇದ್ದಾಳೆ. ಅವಳ ಅಣ್ಣ ವಸಂತ ಈತನ ಆತ್ಮೀಯ ಗೆಳೆಯ ಇಂತಹ ಸರಳ ಸಂಬಂಧಗಳ ಬೇರುಗಳು ತುಂಬಾ ಗಟ್ಟಿಯಾಗಿವೆ.

"ರೇವತಿಗೆ ಚಿಕ್ಕಂದಿನಿಂದಲೇ ಶ್ರೇಯಾಂಸ ಅಂದರ ಹೀರೋ. ಶರಚ್ಚಂದ್ರರ 'ದೇವದಾಸ' ಕಾದಂಬರಿ ಇಬ್ಬರಿಗೂ ಆಗ ಅತ್ಯಂತ ಪ್ರಿಯವಾದ ಕತೆ. ಶ್ರೇಯಾಂಸ ಬೇರೆ ಜಾತಿಯವ, ಆತ ಪ್ರತಿಷ್ಠಿತ ಮನೆತನದ, ಅಷ್ಟೊಂದು ಶ್ರೀಮಂತ ಅಲ್ಲದಿದ್ದರೂ ಇದ್ದುಳ್ಳಂಥ ಕುಟುಂಬದ, ಒಬ್ಬನೇ ಮಗ ಹಾಗೆ ನೋಡಿದರೆ ರೇವತಿ ಶ್ರೇಯಾಂಸನೊಡನೆ ಲಗ್ನ ಮಾಡಿಕೊಳ್ಳುವ ವಿಚಾರ ಎಂದೂ ಮಾತಾಡಿದವಳಲ್ಲ. ಒಂದು ಸಲ ಆತ ಧಾರವಾಡದಿಂದ ಸೂಟಿಗೆ (ರಜೆ) ಬಂದಾಗ ಅವಳ ಕೈಹಿಡುದು ಶ್ರೇಯಾಂಸ ಕೇಳಿಯೇಬಿಟ್ಟಿದ್ದ. "ರೇವತಿ, ನಾನಿನ್ನ ಪ್ರೀತಿಸ್ತೀನಿ ಅನ್ನೋದು ಗೊತ್ತದೆನೋ ಇಲ್ಲೊ" "ಇಲ್ಲ-ನಂಗೊತ್ತಿಲ್ಲ", ಎಂದಿದ್ದಳು ರೇವತಿ. "ನನ್ನ ಲಗ್ನ ಆಗ್ತಿ ಹೌದಲ್ಲೊ ?" "ಏನ ಹುಚ್ಚತನ ಇದು. ನಿಮ್ಮಪ್ಪ ಇರೋ ತನಕ ಈ ಊರಾಗಿನ ಮಂದಿ ಇರೋತನಕ ಶಕ್ಯ ಅದ ಏನು ? ಮತ್ತ ನಾ ಹೂ ಅನಬೇಕಲ್ಲ"(22) ಇಲ್ಲಿಂದ ಪ್ರಾರಂಭವಾದ ಶ್ರೇಯಾಂಸ-ರೇವತಿಯರ ಪ್ರೇಮ ಮುಂದೆ ಬಲವಾಗುತ್ತ ಹೋಗುತ್ತದೆ. ಕಡೆಗೆ ಶ್ರೇಯಾಂಸನ ಮನೆಯವರಿಗೆಲ್ಲ ತಿಳಿದು ರಂಪಾಟವಾಗುತ್ತದೆ. ಮಾರ್ಕ್ಸ್, ರಸೆಲ್‌ರ ಕೃತಿಗಳಿಂದ ಪ್ರಭಾವಿತನಾದ ಶ್ರೇಯಾಂಸ, ತಂದೆಯ ವಿರೋಧವನ್ನು ಕಟ್ಟಿಕೊಳ್ಳುತ್ತಾನೆ. ರೇವತಿಯನ್ನು ಬಿಟ್ಟು ಮುಂಬೈಗೆ ಉಟ್ಟ ಬಟ್ಟೆಯಲ್ಲಿ ಹೊರಟು ಬಿಡುತ್ತಾನೆ. ಮುಂಬೈನಲ್ಲ ಹೊಸ ಬದುಕನ್ನು ಕಟ್ಟಿಕೊಳ್ಳುತ್ತಾನೆ. ಅಲ್ಲಿ ಲೀಝಿಯ ಪರಿಚಯವಾಗುತ್ತದೆ. ಲೀಝಿ ಕ್ರಿಶ್ಚಿಯನ್ ಆದರೂ ಅವಳ ಗುರ್ತಾಗಿ ಭೇಟಿಗಳೆಲ್ಲ ಮುಗಿದ ಮೇಲೆ ಲೀಝಿಯನ್ನು ಮದುವೆಯಾಗುವ ಇಂಗಿತದಿಂದ ಅವಳ ತಂದೆ ಪ್ರೊ॥ ಪಾಲ್‌ರನ್ನು ಕೇಳುತ್ತಾನೆ, ಕಡೆಗೆ ಲೀಝಿಗೆ ಹಲವಾರು ಪತ್ರಗಳನ್ನು ಬರೆದು ಅವಳನ್ನು ಒಪ್ಪಿಸಿ ವಿವಾಹವಾಗುತ್ತಾನೆ. ಲೀಝಿ ರೇವತಿಗಿಂತ ಸೂಕ್ಷ್ಮ ಮನಸ್ಸಿನ ಹುಡುಗಿ, ಶ್ರೇಯಾಂಸನ ಪರಿಚಯವಾದ ನಂತರ ಅವನನ್ನು

ಪ್ರಾರಂಭದಲ್ಲಿ ಪ್ರೀತಿಸಲು ನಿರಾಕರಿಸಿದರು. ಶ್ರೇಯಾಂಸನ ಒತ್ತಡಕ್ಕೆ ಮಣಿದು ಒಪ್ಪುತ್ತಾಳೆ. ಶ್ರೇಯಾಂಸ ಮತ್ತು ಲೀಝಿಯವರ ಸಂಬಂಧ ಅನ್ಯೋನ್ಯವಾಗಿರುತ್ತದೆ. ಆದರೆ ತಂದೆ ಸತ್ತ ಸುದ್ದಿ ಬಂದು, ಶ್ರೇಯಾಂಸ ಕೃಷ್ಣಾಪುರಕ್ಕೆ ಬಂದ ನಂತರ ನಿಧಾನವಾಗಿ ಶ್ರೇಯಾಂಸ ಮತ್ತು ಲೀಝಿಯರ ಮಧ್ಯೆ ಬಿರುಕು ಮೂಡುತ್ತದೆ. ಅದು ಅವರಿಬ್ಬರ ಪತ್ರ ವ್ಯವಹಾರದಲ್ಲಿ ಢಾಳಾಗಿ ಕಾಣಸಿಗುತ್ತದೆ. ತಂದೆಯ ಶ್ರಾದ್ಧಕ್ಕೆ ಬರುವಂತೆ ಶ್ರೇಯಾಂಸ ಲೀಝಿಗೆ ಪತ್ರ ಬರೆಯುತ್ತಾನೆ. ಆದರೆ ಅದಕ್ಕೆ ಧನಾತ್ಮಕವಾದ ಪ್ರತಿಕ್ರಿಯೆಯನ್ನು ಲೀಝಿ ಕೊಡುವುದಿಲ್ಲ.

ಕೃಷ್ಣಾಪುರದಲ್ಲಿ ಇರುವ ಶ್ರೇಯಾಂಸನಿಗೆ ನಿಧಾನವಾಗಿ ರೇವತಿಯ ಕಡೆ ಮನಸ್ಸು ಸೆಳೆಯುತ್ತದೆ. ರೇವತಿಗೆ ಈಗಾಗಲೇ ಮದುವೆಯಾಗಿದೆ. ಗಂಡನ ಹೆಸರು ಗಂಗಾಧರ ಆತ ಕೂಡ ಒಳ್ಳೆಯವನೆ ಹೆಣ್ಣು ಹೃದಯದ ಮನುಷ್ಯ. ಮದುವೆಯ ನಂತರ ಬೆಂಗಳೂರಿನ ರಾಜಾಜಿನಗರದ ಯಾವುದೋ ಒಂದು ಕಾಲನಿಯಲ್ಲಿ ಜೀವನ ಸಾಗಿಸುತ್ತಿದ್ದ. ಸರಳ ಕುಟುಂಬದಂತೆ ರೇವತಿ–ಗಂಗಾಧರ ಮಗ ಶಶಿಧರ್ ಸುಖವಾಗಿ ಬದುಕುತ್ತಿದ್ದರು. ಆದರೆ ಗಂಗಾಧರ್ ಹಾರ್ಟ್ ಅಟ್ಯಾಕ್ ಆಗಿ ತೀರಿಕೊಂಡ ಮೇಲೆ ಕಡೆಗೆ ರೇವತಿ ಮತ್ತೆ ಮಗನ ಜೊತೆಗೆ ಕೃಷ್ಣಾಪುರಕ್ಕೆ ಬಂದು ನೆಲೆಸುತ್ತಾಳೆ. ಮೊದಲಿಂದಲೂ ಮಗ ಶಶಿಧರ ತಾಯಿಯ ಅಂಕೆ ಇಲ್ಲದೆ ಬೆಳೆದ ತಂದೆ ಇರಲಿಲ್ಲವಾಗಿ ಸ್ವತಂತ್ರವಾಗಿ ಬೆಳೆದು ಮನೆ ಬಿಟ್ಟು ಮುಂಬೈಗೆ ಹೋಗಿದ್ದಾನೆ. ಇಲ್ಲಿ ಒಬ್ಬಳೆ ರೇವತಿ ಬದುಕುವಂತಾಗುತ್ತದೆ. ಇಂತಹ ಸಂದರ್ಭದಲ್ಲಿ ಶ್ರೇಯಾಂಸ ಕೃಷ್ಣಾಪುರಕ್ಕೆ ಬಂದುದು ರೇವತಿಗೆ ಹಳೆಯ ಪ್ರೇಮಿ ಮತ್ತೆ ಬಂದನೆಂಬ ಸಂತಸ, ಇಷ್ಟು ದಿನ ಶ್ರೇಯಾಂಸನ ತಂದೆ ಅಪ್ಪಾಸಾಹೇಬ ಇದ್ದುದರಿಂದ ಈಗ ವಿಚಾರ ಯೋಚಿಸುವುದು ತಪ್ಪಾಗುತ್ತಿತ್ತು. ಆದರೆ ಈ ಅಪ್ಪಾ ಸಾಹೇಬ ಇಲ್ಲವಾಗಿ ಆ ಹೆದರಿಕೆಯೂ ಇಲ್ಲ ಇದರಿಂದ ರೇವತಿಗೆ ಸಣ್ಣ ಆಸೆಯೊಂದು ಚಿಗುರಿದೆ. ಅದಕ್ಕೆ ಶ್ರೇಯಾಂಸನ ಸಹಾಯವು ಇದೆ. ತಂದೆ ಸತ್ತ ಎರಡು ಮೂರು ದಿನಕ್ಕೆ ಶ್ರೇಯಾಂಸ ಸ್ವಲ್ಪ ಹಣ ಕೇಳಲು ವಸಂತನ ಮನೆಗೆ ಬರುತ್ತಾನೆ. ಅಲ್ಲಿ ನಿರ್ಮಲೆಯ ಪರಿಚಯವಾಗುತ್ತದೆ. ವಸಂತ–ನಿರ್ಮಲೆ ಗಂಡ–ಹೆಂಡತಿಯಾಗಿ ಜೊತೆಗಿದ್ದವರು. ವಸಂತನ ಮೇಲೆ ನಿರ್ಮಲೆಗೆ ಹೇಳಿಕೊಳ್ಳುವಂತಹ ಪ್ರೀತಿ ಭಾವನೆಗಳಿಲ್ಲ. ಶ್ರೇಯಾಂಸ ಮನೆಗೆ ಭೇಟಿ ಕೊಟ್ಟಾಗ ತುಂಬಾ ಉತ್ಸಾಹಭರಿತಳಾದ ನಿರ್ಮಲೆ ಮನೆಯನ್ನೆಲ್ಲ ಶ್ರೇಯಾಂಸನಿಗೆ ತೋರಿಸುತ್ತಾಳೆ. ಸ್ವಲ್ಪ ಹೆಚ್ಚೇ ಎನ್ನುವಷ್ಟು ಸಿಂಗಾರ ಮಾಡಿಕೊಂಡು ಅವನನ್ನು ಹೆಚ್ಚು ಮಾತನಾಡಿಸಲು ಪ್ರಯತ್ನಿಸುತ್ತಾಳೆ. ವಸಂತ ಬಂದ ನಂತರ ಗಡಿಬಿಡಿಗೊಳ್ಳುತ್ತಾಳೆ. ಶ್ರೇಯಾಂಸ ವಸಂತನನ್ನು ಮಾತನಾಡಿಸಿ ದುಡ್ಡು ತೆಗೆದುಕೊಂಡು ಮನೆಗೆ ತೆರಳುತ್ತಾನೆ.

ಶ್ರೇಯಾಂಸನ ಆಗಮನದಿಂದ ಕೃಷ್ಣಾಪುರಕ್ಕೆ ಒಂದು ಹೊಸ ಕಳೆ ಬಂದಂತಿದೆ. ಊರಿನವರಿಗೂ ಶ್ರೇಯಾಂಸನ ಮೇಲೆ ಅಭಿಮಾನವಿದೆ. ಅದೇ ರೀತಿ ಶ್ರೇಯಾಂಸನಿಗೂ ಕೃಷ್ಣಾಪುರದ ಬಗ್ಗೆ ಅಭಿಮಾನವಿದೆ. ಈತ ಊರು ಬಿಡುವ ಮುನ್ನ ಅಪ್ಪಾಸಾಹೇಬ-ಅಂಬುಜಾಬಾಯಿಯ ಜೊತೆಗೆ ಸಂಬಂಧ ಬೆಳೆಸಿರುವುದು ಶ್ರೇಯಾಂಸನಿಗೆ ತಿಳಿದಿರುತ್ತದೆ. ಶ್ರೇಯಾಂಸನ ತಾಯಿ ಸರಸಾಗೆ ಈ ವಿಚಾರ ಸೇರುವುದಿಲ್ಲ. ತಂದೆ ಸತ್ತ ಮೇಲೆ ಶ್ರೇಯಾಂಸ, ಅಂಬುಜಾಬಾಯಿಯನ್ನು ಸಂಪರ್ಕಿಸುತ್ತಾನೆ. ಈಗಾಗಲೇ ಅಂಬುಜಾಬಾಯಿಗೆ ಅಪ್ಪಾಸಾಹೇಬನಿಂದ ಒಂದು ಮಗುವಾಗಿ ಅವನಿಗೆ ರಾಮು ಎಂದು ಹೆಸರಿಡಲಾಗಿದೆ. ಆತನಿಗೂ ಈಗಾಗಲೇ 20-25 ವರ್ಷಗಳ ವಯಸ್ಸಾಗಿದೆ. ಅಪ್ಪಾಸಾಹೇಬ ಶ್ರೀಮಂತನಾಗಿದ್ದು ಈ ಸಂಬಂಧ ಇಟ್ಟುಕೊಳ್ಳಲು ಶಕ್ತ. ಆದರೆ, ಮದುವೆಯಾಗಿ ಮತ್ತೊಂದು ಸಂಬಂಧ ನಿಷಿದ್ಧ, ಆದರೂ ಅಪ್ಪಾಸಾಹೇಬ ಸಂಬಂಧವಿರಿಸಿಕೊಂಡು ಒಂದು ಮನೆ, ಸ್ವಲ್ಪ ಬಂಗಾರ, ಜಮೀನು ಕೊಟ್ಟು ಅಂಬುಜಾಬಾಯಿಯನ್ನು ಚೆನ್ನಾಗಿಯೇ ನೋಡಿಕೊಂಡಿದ್ದಾನೆ.

ಶ್ರೇಯಾಂಸ ಅಂಬುಜಾಬಾಯಿಯ ಮನೆಗೆ ಹೋಗಿ ಬಂದಿರುವುದು ಶ್ರೇಯಾಂಸನ ತಾಯಿಗೆ ಸ್ವಲ್ಪವೂ ಇಷ್ಟವಿಲ್ಲ. ಹೀಗಿದ್ದರೂ ಶ್ರೇಯಾಂಸನಿಗೆ ಈ ಅಕ್ರಮ ಸಂಬಂಧ ಕೆಟ್ಟೆನಿಸಿಲ್ಲ ತನ್ನ ತಂದೆಯ ಈ ಕೆಲಸಕ್ಕೆ ಅವನ ಆಕ್ಷೇಪವೇನೂ ಇಲ್ಲ. ಅದರಲ್ಲೂ 'ರಾಮು' ತನ್ನ ತಮ್ಮನಿದ್ದಂತೆ ಎಂದು ತಿಳಿದು ಅವನನ್ನು ತನ್ನ ಜೊತೆಗೆ ಇಟ್ಟುಕೊಂಡಿದ್ದಾನೆ ಮತ್ತು ಅವನಿಗೆ ಹೊಲದ ಸಣ್ಣ-ಪುಟ್ಟ ಜವಾಬ್ದಾರಿಗಳನ್ನು ವಹಿಸಿದ್ದಾನೆ.

ಒಮ್ಮೆ ಶ್ರೇಯಾಂಸ-ವಸಂತ ಮಾತನಾಡುತ್ತ ಕುಳಿತಿರುವಾಗ ವಸಂತ ಶ್ರೇಯಾಂಸನಿಗೆ ಎರಡು ವಿಷಯವನ್ನು ಮನದಟ್ಟು ಮಾಡುತ್ತಾನೆ. ಒಂದು ತನ್ನ ತಂಗಿ ರೇವತಿ ಅವನನ್ನು ಇನ್ನೂ ಪ್ರೀತಿಸುತ್ತಿರುವುದು, ಎರಡು ತನ್ನ ಹೆಂಡತಿ ನಿರ್ಮಲೆಯೂ ಶ್ರೇಯಾಂಸನನ್ನು ಇಷ್ಟಪಟ್ಟಿರುವುದು. ಇದರಿಂದ ಶ್ರೇಯಾಂಶ ವಿಚಲಿತನಾಗುತ್ತಾನೆ. ರೇವತಿ ಶ್ರೇಯಾಂಸನ ಹಿಂದಿನ ಪ್ರೇಯಸಿಯಾಗಿದ್ದು, ಈಗ ಅವಳು ಅವನನ್ನು ಇನ್ನೂ ಪ್ರೀತಿಸಲು ಕಾರಣ ಅವಳ ಗಂಡನನ್ನು ಕಳೆದುಕೊಂಡಿದ್ದಾಳೆ ಮತ್ತು ಮಗ ಕೂಡ ಕಣ್ಮರೆಯಾಗಿದ್ದಾನೆ. ಈಗ ಅವಳಿಗೆ ಒಂದು 'ಗುರಿ' ಬೇಕಾಗಿದೆ. ಆ ಗುರಿ ಶ್ರೇಯಾಂಸನೇ ಯಾಕಾಗಬಾರದು ? ಎಂಬುದು ಅವಳ ಮನದಲ್ಲಿ ಮೂಡಿರಬಹುದು. ಎರಡನೆಯದು ನಿರ್ಮಲೆ ಶ್ರೇಯಾಂಸನನ್ನು ಇಷ್ಟಪಟ್ಟಿರುವುದು, ನಿರ್ಮಲೆಗೆ ಮಕ್ಕಳಿಲ್ಲ ಮತ್ತು ಮದುವೆಗೂ

ಮುನ್ನ ಅವಳದೇನೋ ಕೆಲವು ಭಾನಗಡಿಗಳಿವೆ ಎಂದು ವಸಂತನೇ ಶ್ರೇಯಾಂಸನಿಗೆ ಹೇಳುತ್ತಾನೆ. ಆದುದರಿಂದ ಇಷ್ಟಪಟ್ಟಿರಬಹುದು. ಹಾಗೆಯೇ ಶ್ರೇಯಾಂಸ ಎಲ್ಲ ರೀತಿಯಲ್ಲೂ ವಸಂತನಿಗಿಂತ ಚೆನ್ನಾಗಿದ್ದಾನೆ. ಆದ್ದರಿಂದ ಸಹಜವಾಗಿ ಇಷ್ಟಪಟ್ಟಿರಲು ಸಾಧ್ಯವಿದೆ. ಕೆಲವೊಮ್ಮೆ ಮದುವೆಯಾಗಿರುವ ಹೆಣ್ಣು ಪರ ಪುರುಷನ ಸಾನ್ನಿಧ್ಯವನ್ನು ಏಕೆ ಬಯಸುತ್ತಾಳೆ ಎಂಬುದಕ್ಕೆ ಬಲವಾದ ಕಾರಣ, ಅವಳಲ್ಲಿ ಕೆಲವು ಕೊರತೆಗಳಿದ್ದಾಗ ಮಾತ್ರ ಇಲ್ಲಿ ರೇವತಿಗೆ ಮತ್ತು ನಿರ್ಮಲೆಗೆ ಇಬ್ಬರಿಗೂ ತಮ್ಮದೇ ಆದ ಮಿತಿಗಳು ಇವೆ ಕೊರತೆಗಳು ಇವೆ.

ಶ್ರೇಯಾಂಸ ಕೃಷ್ಣಾಪುರದಲ್ಲೆ ಇರಲು ನಿರ್ಧರಿಸಿದ ಮೇಲೆ ಮುಂಬೈಗೆ ಬಂದು ತಾನು ಕೆಲಸ ಮಾಡುವ ಕಂಪನಿಯಿಂದ ಬಿಡುಗಡೆ ಪಡೆಯುತ್ತಾನೆ. ಆದರೆ ಅವನು ಊಝಿಯನ್ನು ತನ್ನೊಡನೆ ಕೃಷ್ಣಾಪುರಕ್ಕೆ ಕರೆದುಕೊಂಡು ಹೋಗಲು ಬಯಸುತ್ತಾನೆ. ಆದರೆ ಊಝಿ ಒಪ್ಪುವುದಿಲ್ಲ. ಇದೇ ವಿಚಾರವಾಗಿ ಮಗಳು ಕಲ್ಪನ ಜೊತೆ ಮಾಡನಾಡುತ್ತಾನೆ. ಆಗ ಕಲ್ಪನ ಶ್ರೇಯಾಂಸ – ಊಝಿ ಮತ್ತು ರೇವತಿಯ ಬಗ್ಗೆ ಮಾತನಾಡುತ್ತಾಳೆ. "ಡ್ಯಾಡೀ, ನನಗೆ ಕೇಳದರೆ ನೀ ರೇವತೀನ್ನ ಹೃದಯದ ಆಳದಿಂದ ಪ್ರೀತಿಸ್ತೀಯ – ಅವಳಿಗೆ ಹೊಸ ಜೀವನ ಕೊಡಬೇಕಂತ ನೀನು ತೀವ್ರವಾಗಿ ಇಚ್ಛಿಸ್ತೀಯ ..."

"ಹೌದು" ಶ್ರೇಯಾಂಸನಿಗೆ ಒಪ್ಪಿಕೊಳ್ಳಲು ಸಂಕೋಚವೆನಿಸಲಿಲ್ಲ.

"ಅದರರ್ಥ ನಾ ಊಝಿಯನ್ನು ಪ್ರೀತಿಸುವುದಿಲ್ಲವೆಂದಲ್ಲ –

"ಡ್ಯಾಡೀ ಮಮ್ಮಿಯಂತೂ ನಿನಗೆ ಬೇಕೆ ಬೇಕು ಅವಳಿಲ್ಲದೆ ನೀನು ಹಾಯಾಗಿ ಇರುವುದು ಶಕ್ಯವೇ ಇಲ್ಲ –"

"ಹಾಗಂತಿ"?(23) ಈ ಸಂವಾದದಲ್ಲಿ ಶ್ರೇಯಾಂಸನ ಮನಸ್ಸಿನ ಒಳತೋಟಿಯನ್ನು ಕಲ್ಪನ ಸ್ಪಷ್ಟವಾಗಿ ಬಿಡಿಸಿ ಹೇಳಿದ್ದಾಳೆ. ಇತ್ತ ಊಝಿಯನ್ನು ಬಿಡಲಾಗದೆ ಅತ್ತ ರೇವತಿಯನ್ನು ಕಟ್ಟಿಕೊಳ್ಳಲಾಗದ ದ್ವಂದ್ವದಲ್ಲಿ ಶ್ರೇಯಾಂಸ ಇದ್ದಾನೆ. ಆದರೆ ಮುಂದೆ ಊಝಿಯನ್ನೇ ಬಿಟ್ಟು ಶಾಶ್ವತವಾಗಿ ಕೃಷ್ಣಾಪುರದಲ್ಲೇ ಇರಲು ನಿರ್ಧರಿಸುತ್ತಾನೆ. ಕಾದಂಬರಿಯ ಕಡೆಯಲ್ಲಿ ಆ ವಿವರಣೆ ಹೀಗೆ ಬರುತ್ತದೆ "ಊಝಿ, 'ಶ್ರೇಯ್ ನೀ ಮುಂಬಯಿಗೆ ಬಂದರೆ ಭಾಳ ಒಳ್ಳೇದು. ಆದರೆ ನೀನಿಲ್ಲಿಯೆ ಇರಲು ನಿರ್ಧರಿಸಿದರೆ ಅದಕ್ಕೂ ನನ್ನ ಒಪ್ಪಿಗೆ ಆದರೆ ನಾವೀಗಲೇ ಬರಲು ಸಾಧ್ಯವಿಲ್ಲ – ನನಗೆ ಒಳಗಿನಿಂದ ಅನಿಸಿದಾಗ ನನ್ನ ದೇವರು ನನಗೆ ಹೋಗೆಂದು ಹೇಳಿದಾಗ – ನಾ ಬರುವೆ ಆದೀತೆ ?" ಎಂದು ಹೇಳಿದ್ದಳು.

ಪ್ರೊ॥ ಪಾಲ್ "ಯಾವುದಕ್ಕೂ ನೀನು ಸ್ವತಂತ್ರ. ನನಗೆ ನೀನು ಅಲ್ಲಿ ಬಂದರೂ ಅಷ್ಟೇ ಬಿಟ್ಟರೂ ಅಷ್ಟೇ !" ಎಂದಿದ್ದರು.

ಕಲ್ಪನೆಯೊಬ್ಬಳೆ ಅತ್ಯಂತ ಖಚಿತವಾಗಿ ಹೇಳಿದ್ದಳು. "ಡ್ಯಾಡಿ ನೀ ಇಲ್ಲೇ ಇರಬೇಕು. ಇದೇ ನಿನ್ನ ಕರ್ಮಭೂಮಿ" (24)

ಶ್ರೇಯಾಂಸ ಕೃಷ್ಣಾಪುರದಲ್ಲಿ ಉಳಿಯುವ ಖಚಿತ ನಿರ್ಧಾರದೊಂದಿಗೆ ಕಾದಂಬರಿ ಮುಗಿಯುತ್ತದೆ.

**'ಅಂತರಾಳ'** ಶಾಂತಿನಾಥ ದೇಸಾಯಿ ಅವರ ಆರನೇ ಕಾದಂಬರಿ. ಈ ಕಾದಂಬರಿಯ ಕಥಾ ನಾಯಕ 'ವಿಕ್ರಮ ರಾಣೆ' ಈ ಕಾದಂಬರಿಯ ಸೊಗಸು ಇರುವುದು ವಿಕ್ರಮ ರಾಣೆಯ ಆತ್ಮ ನಿವೇದನೆಯಂತೆ ಕಾದಂಬರಿ ಮೂಡಿ ಬಂದಿರುವುದು.

ವಿಕ್ರಮ ರಾಣೆ ಒಬ್ಬ ರಾಜ ಮನೆತನದವನು. ಶಿವಾಜಿಯ ಹತ್ತಿರದ ಸಂಬಂಧಿ. ಅವರ ಕುಟುಂಬದವರೆಲ್ಲ ದೊಡ್ಡ ದಂಧ (ವ್ಯಾಪಾರ) ಮಾಡಿ ಶ್ರೀಮಂತರಾಗಿರುವವರು. ಈತ ಇಂಜಿನಿಯರ್ ಆಗಿ ಸರ್ಕಾರಿ ಕೆಲಸದಲ್ಲಿದ್ದಾನೆ. ವಿಕ್ರಮನಿಗೆ ಅವನ ಯೋಚನೆಗಳಲ್ಲಿ ಕೆಲವು ಗೊಂದಲಗಳಿವೆ. ತನ್ನ ಬಗ್ಗೆ ಹೇಳಿಕೊಳ್ಳುತ್ತ "ನಾನು ನನ್ನ ಅನುಭವಗಳ ಬಗ್ಗೆ ಹೇಳಿದ್ದರಲ್ಲಿ ಸ್ವಲ್ಪ ಸತ್ಯವಿದೆಯೆಂದು ಒಪ್ಪಿಕೊಂಡರೂ" ನಾನು ಇತರರ ಬಗ್ಗೆ ಬರೆದದ್ದರಲ್ಲಿ ವಸ್ತುನಿಷ್ಠ ಸತ್ಯವಿದೆಯೆ ? ಅಥವಾ ಇತರರು ನನ್ನ ಅನುಭವ ವಿಶ್ವದಲ್ಲಿಯ ಪಾತ್ರಗಳೇ? – ನಾನೇ ನಿರ್ಮಿಸಿದ ಪಾತ್ರಗಳೇ ? ಎಷ್ಟೋ ಸಲ ಇತರರ ಬಗ್ಗೆ ಸಾಕಷ್ಟು ಹೇಳಲು ಬರುವುದಿಲ್ಲ. ಯಾಕೆಂದರೆ ಅದರ ಒಳಗಿನ ವಿಶ್ವಕ್ಕೆ ನಾನು ಹೊರಗಾದವ". (25) ಈ ರೀತಿ ತನ್ನನ್ನು ಅಸ್ತಿತ್ವದ ಹಿನ್ನೆಲೆಯಲ್ಲಿ ಹುಡುಕಾಟಕ್ಕಿಳಿದ ವಿಕ್ರಮ ತನ್ನ ಸ್ನೇಹಿತ ಗೋವಿಂದನ ತಂಗಿ ಯಶೋಧಳನ್ನು ಪ್ರೀತಿಸುತ್ತಾನೆ. ಯಶೋಧ ಬ್ರಾಹ್ಮಣ ಜಾತಿಯವಳು ಈತ ಕ್ಷತ್ರಿಯ ಆದರೂ ಆಕೆಯನ್ನು ಮನೆಯವರ ವಿರೋಧದ ನಡುವೆ ಮದುವೆಯಾಗುತ್ತಾನೆ. ಇವರಿಗೆ ವಸುಂಧರೆ ಮತ್ತು ಮಾಧವ ಎಂಬ ಇಬ್ಬರು ಮಕ್ಕಳಾಗುತ್ತಾರೆ. ಯಶೋಧ ಹೆಚ್ಚು ಮಾಡನಾಡುವವಳಲ್ಲ. ಆದರೆ ವಿಕ್ರಮನನ್ನು ಹೆಚ್ಚಾಗಿ ಹಚ್ಚಿಕೊಂಡಿದ್ದಾಳೆ. ಅವಳ ಬಗ್ಗೆ ಬರೆಯುತ್ತ ವಿಕ್ರಮ ಈ ರೀತಿ ಪ್ರತಿಕ್ರಿಯಿಸುತ್ತಾನೆ. "ಸ್ತ್ರೀಗೆ ವರ್ತಮಾನ ಯಾವಾಗಲು ಬಹಳ ಮುಖ್ಯವಿರಬೇಕು. ಅವಳ ಮೈಯ ಲಯಗಳೂ ಕಾಲದ ಲಯಗಳಿಗೆ ಹೊಂದಿಕೊಂಡಿವೆ. ತಿಂಗಳಿಗೊಮ್ಮೆ ಅವಳ ದೇಹದಲ್ಲಿ ತೆರೆಯ ಏರಿಳಿತವಾಗುತ್ತದೆ – ಮುಖ್ಯವಾಗಿ ರಕ್ತದ ತೆರೆ. ಮನುಷ್ಯ ಜೀವನದ ಒಂದು ಮುಖ್ಯ ಘಟಕವಾದ ರಕ್ತ ಅವಳ ದೈನಂದಿನ ಜೀವನದ ಅಂಗವಾಗಿದ್ದು ಅದರ

ಸಹವಾಸವೇ ಅವಳನ್ನು ಈ ಭೂಮಿಗೆ, ಈ ಅಸ್ತಿತ್ವಕ್ಕೆ ಕಟ್ಟಿಹಾಕಿದೆ. ವಾಸ್ತವಿಕತೆಯ ಪ್ರಜ್ಞೆ, ವರ್ತಮಾನದ ಪ್ರಜ್ಞೆ, ಪರಿಸರದ ಪ್ರಜ್ಞೆ ಸ್ತ್ರೀಗೆ ಇದ್ದಷ್ಟು ಪುರುಷನಿಗಿರುವುದಿಲ್ಲ"(26)

ಗಂಡು-ಹೆಣ್ಣಿನ ಸಂಬಂಧದ ನೈಜ ಮತ್ತು ವೈಜ್ಞಾನಿಕವಾದ ಉತ್ತರ ದೇಸಾಯಿ ಅವರಿಂದ ಈ ಕಾದಂಬರಿಯಲ್ಲಿ ಸಿಗುತ್ತದೆ. ಹೆಣ್ಣಿನ ಯೋಚನಾಲಹರಿಗಳಗೂ, ಗಂಡಿನ ಯೋಚನಾ ಲಹರಿಗಳಗೂ ತೀರ ಭಿನ್ನತೆ ಇದೆ ಮತ್ತು ಅವರು ಬೆಳೆದು ಬಂದ ಪರಿಸರವೂ ಇದಕ್ಕೆ ಕಾರಣವಾಗಿದೆ.

ಯಶೋಧ ಮತ್ತು ವಿಕ್ರಮ ರಾಣೆ ಇಬ್ಬರು ಪೂಜಾ ಮಾಸ್ತರ ಸಹಾಯದಿಂದ ವಿವಾಹವಾಗಿ ಚೆನ್ನಾಗಿರುತ್ತಾರೆ. ಆದರೆ ಸರ್ಕಾರಿ ಅಧಿಯಾರಿಯಾದ ವಿಕ್ರಮ ರಾಣೆ ಅಲ್ಲಿನ 'ಲಂಚ'ತನವನ್ನು ಕಂಡು ಬೇಸತ್ತು ಅದಕ್ಕೆ ರಾಜೀನಾಮೆ ನೀಡುತ್ತಾನೆ. ಇದೇ ಸಂದರ್ಭದಲ್ಲಿ ವಿಕ್ರಮ ರಾಣೆಯ ಮನಸ್ಸಿನಲ್ಲಿ ಒಂದು ಯೋಚನೆ ಹೊಳೆಯುತ್ತದೆ. ಅದೇ ಲೋಕಾಸ್ಟ್ ಮನೆಗಳನ್ನು ಕಟ್ಟಿ ಬಡವರಿಗೆ ಅತ್ಯಂತ ಕಡಿಮೆ ಬೆಲೆಯಲ್ಲಿ ವಿತರಿಸುವುದು. ಹೀಗಿರುವಾಗಲೇ ಜಾನ್ ಮತ್ತು ಆಗ್ನೀಸ್‌ರ ಸ್ನೇಹ ಬೆಳೆಯುತ್ತದೆ. ಜಾನ್ ಮತ್ತು ಆಗ್ನೀಸ್ ಗೋವೆಯವರು, ಆಗ್ನೀಸ್ ಅಂತು ಗೋವೆಯ ಮಾಗಿದ ಹಣ್ಣಿನಂತೆ ಇರುವವಳು ಅವಳ ಸ್ನೇಹ ಆದ ಮೇಲೆ ಅವಳೊಂದಿಗೆ ಹೆಚ್ಚು ಓಡಾಡುವುದು ವಿಕ್ರಮನಿಗೆ ಅನಿವಾರ್ಯವಾಗುತ್ತದೆ. ಆದರೆ ಅದೇ ಸಂದರ್ಭದಲ್ಲಿ ಯಶೋಧೆಯ ಜೊತೆಗೆ ಸಂಬಂಧ ಹಳಸುತ್ತದೆ. ಆಗ್ನೀಸ್‌ಳೊಂದಿಗೆ ವಿಕ್ರಮ ರಾಣೆಗೆ ಸಂಬಂಧವಿರಬಹುದು ಎಂಬ ಗುಮಾನಿ ಅವಳ ತಲೆಯನ್ನು ಹೊಕ್ಕಿರುತ್ತದೆ. ಆದರೆ ವಿಕ್ರಮ ರಾಣೆ ಅವಳ ಮನಸ್ಸಿನ ತುಮುಲವನ್ನು ಮತ್ತು ಸಂಶಯವನ್ನು ತಿಳಿಗೊಳಿಸಲು ಪ್ರಯತ್ನಿಸುತ್ತಾನೆ. ಆದರೆ ಅದು ಸಾಧ್ಯವಾಗುವುದಿಲ್ಲ. ಇಬ್ಬರ ಸಂಬಂಧದಲ್ಲೂ ಬಿಕ್ಕಟ್ಟು ಎದುರಾಗುತ್ತದೆ.

ಲೋಕಾಸ್ಟ್ ಮನೆಯ ನಿರ್ಮಾಣಕ್ಕೆ ಸಂಬಂಧಿಸಿದಂತೆ ಜಾರ್ಜ್, ವಸಂತ ಮತ್ತು ಅಶ್ವಿನಿಯರನ್ನು ಭೇಟಿ ಮಾಡಿಸುತ್ತಾನೆ. ವಸಂತ ಮಹಾಬಲೇಶ್ವರದವನು ಅಶ್ವಿನಿ ಗೋವಾದವಳು ಇವರಿಬ್ಬರೂ ಓದುವಾಗಲೇ ಸ್ನೇಹಿತರಾಗಿ ಈಗಲೂ ಸ್ನೇಹಿತರಾಗಿಯೇ 'ಲೀವ್ ಟುಗೇದರ್' (ಜೊತೆಯಾಗಿ ಜೀವಿಸುವುದು) ನಂತೆ ಜೊತೆಗೆ ಬದುಕುತ್ತಿದ್ದಾರೆ. ಇವರಿಬ್ಬರು 'ಆರ್ಕಿಟೆಕ್ಟ್'ಗಳು ಅಶ್ವಿನಿ ನೇರವಾಗಿ ವಿಕ್ರಮನನ್ನು ಅವನ ಪ್ರಾಜೆಕ್ಟ್ ಬಗ್ಗೆ ವಿಚಾರಿಸಿ ಸೇರುತ್ತಾಳೆ. ವಿಕ್ರಮ ರಾಣೆ ಹೊಸ ಮನೆಯ ಗೃಹ ಪ್ರವೇಶಕ್ಕೆ ಅಶ್ವಿನಿ ಮತ್ತು ವಸಂತ, ಜಾರ್ಜ್ ಮತ್ತು ಆಗ್ನೀಸ್‌ರವನ್ನು ಆಹ್ವಾನಿಸುತ್ತಾನೆ. ಇದರಿಂದ ವಿಕ್ರಮರ ಮತ್ತು ಯಶೋಧೆಯ ಸಂಬಂಧ ಇನ್ನೂ

ಹಾಳಾಗುತ್ತದೆ. ಯಶೋಧೆಯು ಮೊದಲು ಆಗ್ನೀಸ್‌ಳನ್ನು ಸಂಶಯದಿಂದ ನೋಡಿದರು ನಂತರ ಅವಳ ಸಂಶಯ ಅಶ್ವಿನಿಯೆಡೆಗೆ ಹೊರಳುತ್ತದೆ. ನಮಗೆ ಈಗಿರುವ ಆದಾಯವೇ ಸಾಕು ಇಂತಹವರನ್ನು ಏಕೆ ನೀವು ಸೇರಿತ್ತೀರಿ ಬಿಟ್ಟು ಬಿಡಿ ಎಂದು ಜಗಳವಾಡುತ್ತಾಳೆ. ಆದರೆ ವಿಕ್ರಮನಿಗೆ ಅದು ಸಾಧ್ಯವಾಗುವುದಿಲ್ಲ.

ಅಶ್ವಿನಿಯೊಡನೆ ವಿಕ್ರಮ ಬೇಟೆಯಾಡಲಿಕ್ಕೆ, ತನ್ನ ಪ್ರೋಜೆಕ್ಟ್ ಚರ್ಚಿಸಲಿಕ್ಕೆ ದಾಂಡೇಲಿಗೆ ತೆರಳುತ್ತಾನೆ. ಅಶ್ವಿನಿಯ ಗಂಡನಾದ ವಸಂತನ ತಾಯಿ ಅನಾರೋಗ್ಯದಿಂದ ಬಳಲುತ್ತಿದ್ದು ಆಕೆಯನ್ನು ನೋಡಲು ವಸಂತ ಮಹಾಬಲೇಶ್ವರಕ್ಕೆ ತೆರಳಿದ ಸಂದರ್ಭದಲ್ಲಿ ಈ ಘಟನೆ ನಡೆಯುತ್ತದೆ. ಇಬ್ಬರು ದಾಂಡೇಲಿಯ ಕಾಡಿನ ಫಾರೆಸ್ಟ್ ಗೆಸ್ಟ್ ಹೌಸ್‌ನಲ್ಲಿ ಇದ್ದಾಗ ಅವರಿಬ್ಬರು ದೈಹಿಕವಾಗಿ ಒಂದಾಗುತ್ತಾರೆ. ಆನಂತರ ಪಾಪಪ್ರಜ್ಞೆಗೆ ಸಿಲುಕಿಕೊಂಡ ವಿಕ್ರಮ ಅಳಲು ಪ್ರಾರಂಭಿಸುತ್ತಾನೆ. ಇದರಿಂದ ಚಕಿತಗೊಂಡ ಅಶ್ವಿನಿ ಅವನನ್ನು ಏಕೆಂದು ಕೇಳುತ್ತಾಳೆ. ಆಗ ವಿಕ್ರಮ ರಾಣೆ "ಅಶ್ವಿನೀ, ಏನೋ ದ್ರೋಹ ಬಗೆಯುತ್ತಿದ್ದೇನೆ – ಅಂತ ಅನಿಸ್ತಾ ಇದೆ ವಸಂತನಿಗೆ – ಯಶೋಧೆಗೆ..."[27] ಎನ್ನುತ್ತಾನೆ. ಇದರಿಂದ ಆಕೆ ಅವನನ್ನು ಸಮಾಧಾನ ಪಡಿಸುತ್ತಾಳೆ. ವಸಂತನ ಜೊತೆಗಿನ ಸಂಬಂಧದ ಬಗ್ಗೆ ವಿವರಿಸುತ್ತ "ವಸಂತ ನನ್ನ ಮೂರನೇ ಪುರುಷ ! ಮೊದಲನೇಯವ ಕಟಕದಲ್ಲಿ ನಾ ಕಲಿಯುವಾಗ ನನ್ನ ಕ್ಲಾಸ್‌ಮೇಟ್ ಒಬ್ಬ ಇದ್ದ – ಬಿಜು ಮಹಾಪಾತ್ರ ಅಂತ. ಅಪ್ಪ ಅದಕ್ಕೆ ನನ್ನನ್ನು ಆಯ್.ಎ.ಎಸ್. ತಮ್ಮನ ಕಡೆ ಕಳಿಸಿದ. ಮುಂಬೈಯಲ್ಲಿ ನಮ್ಮ ಕಾಲೇಜಿನಲ್ಲಿ ಅದೇ ಕಲಿಸಲು ಶುರು ಮಾಡಿದ ಲೆಕ್ಚರರ್ ನನ್ನ ಮೇಲೆ ಕಣ್ಣಿಟ್ಟ. ನಾನು ಅವನ ಪ್ರೀತಿಯನ್ನು ಎದೆಯ ಮೇಲೆ ಲೇಬಲ್ ಹಚ್ಚಿಕೊಂಡಂತೆ ಮೆರೆದೆ..."[28]

ಅಶ್ವಿನಿ ವಸಂತನ ಬಗ್ಗೆ ಮಾತನಾಡುತ್ತಾಳೆ. "ವಸಂತನಿಗೆ ಸ್ವಲ್ಪ ಗಂಡಸ್ತನ ಕಡಿಮೆ. ಆದರೆ ಅದಕ್ಕಲ್ಲ ನಾ ನಿನ್ನ ಮೆಚ್ಚೋದು, ನಿನ್ನನ್ನು ಮೊದಲಿನಿಂದಲೂ ಮೆಚ್ಚಿದೆಯಂತ – ಸ್ನೇಹದ ಸಂಬಂಧವಿದು. ಒಂದು ರೀತಿಯ ಪ್ಲಟೋನಿಕ್ ಸಂಬಂಧ. ಯಾಕೆಂದರೆ ಹಾಗೆ ಇಬ್ಬರಿಗೂ ಸಂಭೋಗದ ಅವಶ್ಯಕತೆಯಿಲ್ಲ ನಮ್ಮ ಸಂಬಂಧಕ್ಕೆ ಬಂಧವಿರಬಾರದು ಅದರಲ್ಲಿ ಸ್ವಚ್ಛಂಧತೆ ಇರಬೇಕು–ಒಂದು ರೀತಿ ಆಟ ಇರಬೇಕು–ಆರೋಗ್ಯ ಇರಬೇಕು –ಸಾರಿ, ಏನೋ ಶಬ್ಧ ತಪ್ಪು–ತಪ್ಪು ಉಪಯೋಗಿಸ್ತಾ ಇದ್ದೀನಿ... ಇಷ್ಟನ್ನು ತಿಳಕೋ– ನಮ್ಮ ಸಂಬಂಧಕ್ಕೆ ಅದರದೇ ಆದ ಪೂರ್ಣತೆಯನ್ನು ಕೊಡಬೇಕಿತ್ತು..."[29].

ಅಶ್ವಿನಿ ಮತ್ತು ವಿಕ್ರಮರ ಸಂಬಂಧ ಮುಂದುವರಿದಂತೆ ಅದು ಅವನ ಅಜ್ಜಿಗೂ ತಿಳಿದು ಗದರುತ್ತಾಳೆ. ಹಾಗೆ ಅವನ ಪ್ರೀತಿಯ ಗುರುಗಳಾದ ಪೂಜಾರ್ ಮಾಸ್ತರ್ ಕೂಡ ಇವನಿಗೆ ಬುದ್ಧಿ ಹೇಳಲು ಬಂದು ಹೇಳಲಾಗದೆ ಕೇವಲ ವಿಷಯವನ್ನಷ್ಟೆ ತೆಗೆದು ಏನೂ ಹೇಳದೆ ಕಳಿಸುತ್ತಾರೆ. ಆದರೆ ಇದಕ್ಕೆಲ್ಲ ತಲೆಕೆಡಿಸಿಕೊಳ್ಳದ ವಿಕ್ರಮ ತನ್ನ ಲೋಕಾಸ್ಟ್ ಹೌಸ್‌ನ ಯೋಜನೆಯಲ್ಲಿ ವಸಂತ ಮತ್ತು ಅಶ್ವಿನಿ ಜೊತೆಗೆ ಹಗಲಿರುಳು ದುಡಿಯುತ್ತಾನೆ. ಅವರ ಸಂಬಂಧವು ಅನಾಯಾಸವಾಗಿ ಮುಂದುವರಿದಿದೆ. ಯಶೋಧೆಯು ಕೂಡ ಇಂಗ್ಲೀಷ್ ಎಂ.ಎ. ಮಾಡಿಕೊಂಡು ಯಾವುದೋ ಕಾಲೇಜಿನಲ್ಲಿ ಪಾರ್ಟ್ ಟೈಮ್ ಲೆಕ್ಚರರ್ ಕೆಲಸಕ್ಕೆ ಸೇರಿದ್ದಾಳೆ. ಹೀಗಿರುವಾಗಲೇ ತಂದೆಯ ಅನಾರೋಗ್ಯದ ಕಾರಣವೊಡ್ಡಿ ಅಶ್ವಿನಿ ಕಲ್ಕಟಗೆ ತೆರಳುತ್ತಾಳೆ. ಆದರೆ ಅದನ್ನು ವಿಕ್ರಮನಿಗೆ ಹೇಳದೆ ತೆರಳಿರುತ್ತಾಳೆ. ಹಾಗೆ ವಸಂತ ಕೂಡ ಬೇರೆ ಬೇರೆ ಯೋಜನೆಗಳನ್ನು ಹಾಕಿಕೊಂಡು ಅಮೇರಿಕಾಗೆ ತೆರಳಲು ಅನುವಾಗುತ್ತಾನೆ. ಅಶ್ವಿನಿ ಹಿಂದಿರುಗಿ ಬರದ ಕಾರಣ ಆತ ಅಮೇರಿಕಾಗೆ ತೆರಳಲು ಮನಸ್ಸು ಮಾಡಿದ್ದಾನೆ. ಹೋಗುವ ಮುನ್ನ ಈ ಪ್ರಾಜೆಕ್ಟ್ ಅನ್ನು ಚೆನ್ನಾಗಿ ಮಾಡು ಎಂದು ವಿಕ್ರಮನಿಗೆ ಹೇಳಿ ತೆರಳುತ್ತಾನೆ. ಇದಾದ ಎರಡು ತಿಂಗಳ ನಂತರ ಅಶ್ವಿನಿ ವಿಕ್ರಮನಿಗೆ ಬರೆದ ಒಂದು ಪತ್ರ ವಿಕ್ರಮನಿಗೆ ಸಿಗುತ್ತದೆ. ಅದನ್ನು ಯಶೋಧ ಒಡೆದು ಓದಿ 'ಸಿಕ್ಕಾಗ ಸಿಗಲಿ' ಎಂಬಂತೆ ಒಂದು ಡೈರಿಯಲ್ಲಿ ಇಟ್ಟಿರುತ್ತಾಳೆ. ಆ ಪತ್ರದಲ್ಲಿ ಅಶ್ವಿನಿ ವಿಕ್ರಮ ರಾಣೆಗೆ

"ನಿನ್ನ ಹೃದಯದ ಅಂತರಾಳದಿಂದ ನನ್ನನ್ನು ಕ್ಷಮಿಸು ನಿನಗೆ ಸುಖದ ಜೊತೆ ಪಾಪಪ್ರಜ್ಞೆಯನ್ನು ಕೊಟ್ಟೆ. ಅದೇ ನಿನ್ನನ್ನು ನರಕದಲ್ಲಿ ಎಳೆಯಿತು. ಆದರೆ 'ಪಾಪಪ್ರಜ್ಞೆ' ನಿನ್ನ ಸಂವೇದನೆಯನ್ನು ನಿನ್ನ ದೇಹವನ್ನು ಎಷ್ಟು ಚುರುಕುಗೊಳಿಸಿತು ಗೊತ್ತೇ ?..."

"ಏನೇ ಇದ್ದರು ನಿನ್ನ ಜೊತೆ ಬಹಳ ದಿನ ಇರುವುದು ಶಕ್ಯವಿದ್ದಿಲ್ಲ. ನನಗದು ಗೊತ್ತಿತ್ತೆಂದೆ ನನ್ನ ವರ್ತನೆಯಲ್ಲಿಯೂ, ಪ್ರೀತಿಯಲ್ಲಿಯೂ ಒಂದು ರೀತಿಯ ಕೀಟ್ಸ್ ಹೇಳುವಂತ 'ಇಂಟೆನ್ಸಿಟಿ'–ತೀಕ್ಷ್ಣತೆ ಬಂದಿತ್ತು. ನನ್ನ ಒಳಗಿನ ಎಲ್ಲ ಸಾಧ್ಯತೆಗಳನ್ನು ವಸಂತನ ಹಾಗೂ ನಿನ್ನ ಮೂಲಕ ಅನ್ವೇಷಿಸಿದ್ದೇನೆ. ವಸಂತ ಒಂದು ಎತ್ತರದ ಕಲಾತ್ಮಕ ಹಾಗೂ ತಾತ್ವಿಕ ಎತ್ತರದ ಪಾತಾಳಿಯ ಮೇಲೆ ಇರುವಂಥ ನಿರ್ಲಿಪ್ತ ಮನುಷ್ಯ. ನೀನು ಒಂದು ಮಾನವೀಯ ಆದರ್ಶವಾದದ ಪಾತಾಳಿಯ ಮೇಲೆ ಇರುವಂಥ ಜೀವನದ ಎಲ್ಲ ತೊಡಕುಗಳಲ್ಲಿ ಅಡಕಗೊಂಡಿರುವೆ... ನಾನು ಅಂತರಾಳದಲ್ಲಿ ಓಡಾಡುವ – ನನ್ನ ಅಪ್ಪನ ಮಗಳು !"

"ಯಶೋಧೆಯ ಮುಂದೆ ಕೈಯೊಡ್ಡಿ ಕ್ಷಮಿಸಿರಿ ಎಂದು ಹೇಳಿ ಬರುವುದಿತ್ತು. ಆದರೆ ಗಡಿಬಿಡಿಯಾಯಿತು. ಅಂದು ಧೈರ್ಯವೂ ಇದ್ದಿಲ್ಲ. ಈಗ ಧೈರ್ಯ ಬಂದಿದೆ. ನನ್ನ ವಿಷಯದ ಬಗ್ಗೆ ನೀವಿಬ್ಬರೂ ಎಂದಾದರು ಮಾತು ತೆಗೆದರೆ ಅವಳಿಗೆ ನನ್ನ

ಇಚ್ಛೆಯನ್ನು ತಿಳಿಸುವೆಯಾ ವಿಕ್ರಮ್ ?" "ಗುಡ್‌ಬಾಯ್ !" ಎಂದು ಹೇಗೆ ಹೇಳಲಿ ? ಪ್ಲೀಜ್, ಈ ಪತ್ರಕ್ಕೆ ಉತ್ತರ ಬರೆಯಬೇಡ : ನನ್ನ ಆಣೆ, ನಮ್ಮ 'ಪ್ರೀತಿ'ಯ ಆಣೆ: ಉತ್ತರ ಬರೆಯಲೇ ಬೇಡ ಡಾರ್ಲಿಂಗ್." (೩೦)

ಹೀಗೆ ವಿದಾಯ ಹೇಳಿ ಆಕೆ ಹೊರಡುತ್ತಾಳೆ. ಇಲ್ಲಿ ನಾವು ಗಮನಿಸಬೇಕಾದ ಅಂಶವೆಂದರೆ ವಿಕ್ರಮರಾಣೆ ಮತ್ತು ಅಶ್ವಿನಿ ಕೂಡಿ ಮಾಡಿದ ತಪ್ಪನ್ನು ತಾವೇ ತಿದ್ದಿಕೊಳ್ಳುವುದು ಅದನ್ನು ಯಶೋದೆ ಪತ್ರದ ಮೂಲಕ ತಿಳಿದು ಸಮಾಧಾನ ಪಟ್ಟುಕೊಳ್ಳುವುದು.

ವಿಕ್ರಮ ರಾಣೆ ಹದಿಹರೆಯದವನಾಗಿರಬೇಕಾದರೆ ಮನೆ ಕೆಲಸದವಳಾದ ಸೀತೆಯ ಜೊತೆಗೆ ದೈಹಿಕ ಸಂಬಂಧವೇರ್ಪಟ್ಟಿರುತ್ತದೆ. ಅದರ ಫಲವಾಗಿ ಒಂದು ಗಂಡು ಮಗು ಜನಿಸಿರುತ್ತದೆ. ಆ ಮಗುವಿಗೆ ಆಕೆ 'ಪ್ರತಾಪ' ಎಂದು ಹೆಸರಿಟ್ಟಿದ್ದಾಳೆ. ಒಮ್ಮೆ ಗೋವೆಗೆ ಹೋಗಬೇಕಾದರೆ ಅವಳು ಸಿಕ್ಕು ಅವಳ ಮನೆಗೆ ವಿಕ್ರಮ ತೆರಳಿರುತ್ತಾನೆ. ಪ್ರತಾಪ ತನ್ನ ಮಗನೆಂದು ತಿಳಿದು ಅವನಿಗೆ ಏನಾದರೂ ಮಾಡಬೇಕೆಂದು ತನ್ನ ಬಳಿಯೇ ಕೆಲಸಕ್ಕೆ ಇಟ್ಟುಕೊಂಡಿರುತ್ತಾನೆ. ಆದರೆ ಮುಂದೆ 'ಸೀತೆ' ಸತ್ತು ಪ್ರತಾಪ ಮುಂಬೈಗೆ ಹೋದವನು ಮತ್ತೇ ವಿಕ್ರಮನ ಬಳಿಗೆ ಬರುವುದೇ ಇಲ್ಲ. ಇಲ್ಲಿ ಬರುವ ವಿಕ್ರಮನೊಂದಿಗೆ ಬರುವ ಹೆಣ್ಣುಗಳು ಅವನೊಂದಿಗಿನ ಸಂಬಂಧಗಳು ಮತ್ತು ಆ ಸಂಬಂಧದಿಂದ ಉಂಟಾಗುವ ಪರಿಣಾಮಗಳು ಇಡೀ ಕಾದಂಬರಿಯನ್ನು ವ್ಯಾಪಿಸಿವೆ. ವಿಕ್ರಮನೊಂದಿಗೆ ಸಂಬಂಧವಿರಿಸಿಕೊಂಡ ಸೀತೆ, ಹೆಂಡತಿಯಾದ ಯಶೋಧ, ಪ್ರೇಯಸಿಯಾದ ಅಶ್ವಿನಿ ಇವರಲ್ಲಿ ಭಾರತೀಯ ಸಮಾಜದ ಹೆಣ್ಣಿನ ಅಧೋಸ್ಥಿತಿಯ ಬಗ್ಗೆ, ಅಸಹಾಯಕತೆಯ ಬಗ್ಗೆ, ಪಲಾಯನ–ವಾದದ ಬಗ್ಗೆ ಮತ್ತು ಅಸ್ತಿತ್ವದ ಹುಡುಕಾಟದ ಬಗ್ಗೆ ಸೂಚ್ಯವಾಗಿ ತಿಳಿಸುತ್ತಾರೆ. ಗಂಡು–ಹೆಣ್ಣುಗಳು ಒಂದು ಶ್ರೀಮಂತ ಸಮಾಜದಲ್ಲಿ ಮದುವೆಯಾಗಿಯೋ, ಸ್ನೇಹತರಾಗಿಯೋ, ಲಿವಿಂಗ್ ಟುಗೇದರ್ ಆಗಿಯೋ ಇರಬಹುದು ಅದು ತಪ್ಪಲ್ಲ ಎಂಬ ಸಂದೇಶವನ್ನು ಈ ಕಾದಂಬರಿ ನಮಗೆ ಕಟ್ಟಿಕೊಡುತ್ತದೆ. ಎಲ್ಲದಕ್ಕಿಂತ ಮುಖ್ಯವಾಗಿ ಇಂತಹ ಸಮಾಜದಲ್ಲಿ ಸ್ತ್ರೀ–ಪುರುಷರಿಬ್ಬರು ಯಾವುದೇ ನಿರ್ಧಾರ ತೆಗೆದುಕೊಳ್ಳಲು ಸ್ವತಂತ್ರರು ಎಂಬುದನ್ನು ಕಾದಂಬರಿಗಳ ಪಾತ್ರ ಚಿತ್ರಣದಲ್ಲಿ ನಾವು ಶೋಧಿಸಬಹುದಾಗಿದೆ. ಈ ಕಾದಂಬರಿಯ ಹಿನ್ನುಡಿಯಲ್ಲಿ ಮಾರುತಿ ಶಾನಭಾಗ್ ರವರು ಹೇಳುವಂತೆ "ವಸಾಹತುವಾದಿ ವೃತ್ತದಲ್ಲಿಯ ಪುರುಷ ಪ್ರಧಾನತೆ ಎಂದರೆ ಸ್ತ್ರೀ ವಿರುದ್ಧದ ಅವ್ಯವಹಾರಗಳನ್ನೆಲ್ಲ ಅರಗಿಸಿಕೊಂಡೇನು ಎಂಬ ಪುರುಷ ಅಹಂ ಗಂಡ ! ಕಾದಂಬರಿ ಬೊಟ್ಟು ತೋರಿಸುವ ಸ್ತ್ರೀ–ಪುರುಷ ಸಂಬಂಧಗಳು ಈ ಪರಿಸೀಮೆಗಳನ್ನು ಮೀರಿದಂಥವು. ನಾರಿ ಮುಕ್ತಿಯ ಘೋಷಗಳನ್ನು ಬದಿ ಸರಿಸಿದಂಥವು, ಘನವಾದ

ವ್ಯಕ್ತಿ ಸಂಬಂಧಗಳ ಪರಿಶೋಧನೆಗಳು, ಇಂತಹ ಭವಿಷ್ಯ ದರ್ಶನ ಮಾನವ ಸಂಬಂಧಗಳ ಅನ್ವೇಷಣೆ ಕಾದಂಬರಿ ಪ್ರಯತ್ನಿಸುವ ಮಹತ್ವದ ವಿಷಯ."[31]

ಶಾಂತಿನಾಥ ದೇಸಾಯಿ ಅವರ ಏಳನೆಯ ಮತ್ತು ಕಡೆಯ ಕಾದಂಬರಿ **ಓಂ ಣಮೋ.** ಕಾದಂಬರಿ ಪ್ರಕಟಗೊಂಡಿದ್ದು 1999ರಲ್ಲಿ. ಅಷ್ಟರಲ್ಲಾಗಲೆ ಅಂದರೆ 1998 ಮಾರ್ಚ 26ರಂದು ಅವರು ಇಹಲೋಕ ತ್ಯಜಿಸಿದ್ದರು.

ಓಂ ಣಮೋ ಕಾದಂಬರಿಯ ಮುಖ್ಯ ಭೂಮಿಕೆಯಲ್ಲಿ ಬ್ರಿಟನ್‌ನಿಂದ ಭಾರತಕ್ಕೆ ತನ್ನ ಸಂಬಂಧಗಳ ಬೇರುಗಳನ್ನು ಹುಡುಕಿಕೊಂಡು ಬರುವ **ಆ್ಯಡಂ ದೇಸಾಯಿ** ಮತ್ತು ಭಾರತ ಸಂಸ್ಕೃತಿಯ, ಅದರಲ್ಲೂ ಜೈನ ಧರ್ಮದ ಅಧ್ಯಯನಕ್ಕಾಗಿ ಬರುವ **ಆ್ಯನ್ ಈಗಲ್ಟನ್,** ಇವರಿಬ್ಬರೂ ಆತ್ಮೀಯ ಸ್ನೇಹಿತರು. ಭಾರತದ ಕೃಷ್ಣಾಪುರದಲ್ಲಿ 'ದೇವೇಂದ್ರಪ್ಪ' ಎಂಬ ಜೈನ ಧರ್ಮದವನೊಬ್ಬ ವ್ಯಾಪಾರಸ್ಥನಾಗಿದ್ದ, ಶ್ರೀಮಂತನಿದ್ದ ಅವನ ಮಗ **ನೇಮಿನಾಥ**. ನೇಮಿನಾಥ ಹೆಚ್ಚು ಓದಿಕೊಂಡು ಕೃಷ್ಣಾಪುರದಿಂದ ಹೆಚ್ಚು ಅಧ್ಯಯನಕ್ಕಾಗಿ ಇಂಗ್ಲೆಂಡ್‌ಗೆ ತೆರಳಿದ್ದಾನೆ. ಅಲ್ಲಿಯೆ ಕೆಲಸಕ್ಕೆ ಸೇರಿ, ಇಂಗ್ಲೆಂಡಿನವಳನ್ನು ಮದುವೆಯಾಗಿ ಸುಖವಾಗಿದ್ದಾನೆ. ಆದರೆ ಈತ ಇಂಗ್ಲೆಂಡ್‌ಗೆ ತೆರಳುವ ಮುನ್ನ ಮದುವೆಯಾಗಿದ್ದಾನೆ. ಆದರೆ ಹೆಂಡತಿಯನ್ನು ಇಲ್ಲೆ ಬಿಟ್ಟು ತೆರಳಿದ್ದಾನೆ. ದೇವೇಂದ್ರಪ್ಪನ ತಮ್ಮ ಅಪ್ಪ ಸಾಹೇಬ ಕೃಷ್ಣಾಪುರದಲ್ಲಿ ದೊಡ್ಡ ವ್ಯಾಪಾರಸ್ಥ ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಈತ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ, ಈಗ ಹಿರಿಯ ನಾಗರೀಕ, ಕೃಷ್ಣಾಪುರದಲ್ಲೆ ಪ್ರತಿಷ್ಠಿತ ವ್ಯಕ್ತಿ. ಈತನ ಸೇವೆಗೆ ಕೇಂದ್ರ ಸರ್ಕಾರ **ರಾವ್ ಸಾಹೇಬ್, ದೇಶಭಕ್ತ** ಎಂಬ ಬಿರುದುಗಳನ್ನು ನೀಡಿ ಗೌರವಿಸಿದೆ. ಈತನಿಗೆ ಒಬ್ಬ ಮಗನಿದ್ದಾನೆ ಅವನೇ ಭರತ್ ಈತನಿಗೆ ತಂದೆಯಷ್ಟು ವ್ಯವಹಾರ ಕುಶಲತೆ ಇಲ್ಲ. ಎಲ್ಲರನ್ನು ವಿಶ್ವಾಸಕ್ಕೆ ತೆಗೆದುಕೊಂಡು ದಂಧ (ವ್ಯಾಪಾರ) ಮಾಡುವ ಸೌಮ್ಯ ಮನಸ್ಥಿತಿ ಇವನದಲ್ಲ, ಇವನೇ ಹೇಳಿಕೊಳ್ಳುವಂತೆ ತಾನೊಬ್ಬ ಬಿಸಿನೆಸ್‌ಮೆನ್ (ವ್ಯಾಪಾರಸ್ಥ) ಸ್ವಾತಂತ್ರ್ಯೋತ್ತರ ಭಾರತದ ವ್ಯಾಪಾರ ಸಮುದಾಯದ ಎರಡನೇ ಪೀಳಿಗೆಯವನು, ದೇಶ-ವಿದೇಶಗಳಲ್ಲಿ ಇವನಿಗೆ ಸಂಪರ್ಕಗಳಿವೆ. ವಂಶಪಾರಂಪರ್ಯವಾಗಿ ಬಂದ ವ್ಯಾಪಾರವನ್ನು ಬಿಟ್ಟು ದೊಡ್ಡ ಕಂಪನಿಗಳನ್ನು ಸ್ಥಾಪಿಸಿ ವಿಶ್ವಮಟ್ಟದಲ್ಲಿ ಬೆಳೆಯಬೇಕೆಂಬ ಉತ್ಕಟೇಚ್ಛೆ ಈತನದು.

ಅಪ್ಪಾ ಸಾಹೇಬರ ಮಗಳಾದ ನಿರ್ಮಲೆ ವಿವಾಹವಾದ ಕೆಲವೇ ವರ್ಷಗಳಲ್ಲಿ ಗಂಡ ಸತ್ತು ಆಕೆಯು ಅಪ್ಪಾ ಸಾಹೇಬನ ಮನೆಯಲ್ಲೇ ಇದ್ದಾಳೆ. ಇನ್ನು ನಿರ್ಮಲ ಕುಮಾರ ಅಪ್ಪಾ ಸಾಹೇಬರ ಸ್ನೇಹಿತರು ಜೈನ ತತ್ವಶಾಸ್ತ್ರದಲ್ಲಿ ಡಾಕ್ಟರೇಟ್ ಮಾಡಿದ್ದಾರೆ. ಧಾರವಾಡದ ಪದವಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ

ಸಲ್ಲಿಸುತ್ತಿದ್ದಾರೆ. ಇವರ ಒಬ್ಬಳೇ ಮಗಳು ರೋಜ, ಈಕೆ ರಾಜ್ಯಶಾಸ್ತ್ರ ಪದವೀಧರೆ ಕಮ್ಯುನಿಸಂ ಬಗ್ಗೆ ಆಸಕ್ತಿ ಇರುವ ಇವಳು ಮಾರ್ಕ್ಸಿಸ್ಟ್ ಸಂಪ್ರದಾಯದ ಬಗ್ಗೆ ಒಲವುಳ್ಳವಳು. ಈಕೆಯನ್ನು ಆ್ಯಡಂ ಜೊತೆ ಮದುವೆ ಮಾಡಬಹುದೆಂದು ನಿರ್ಮಲ ಕುಮಾರರು ಉತ್ಸಾಹದಲ್ಲಿದ್ದಾರೆ. ಆದರೆ ಅದು ಸಾಧ್ಯವಾಗುವುದಿಲ್ಲ. ಅಪ್ಪಾ ಸಾಹೇಬರ ಹೆಂಡತಿ ಲಕ್ಷುಂಬಾಯಿ ಈಕೆಗೆ ಆ್ಯಡಂನನ್ನು ಕಂಡರೆ ಬಹಳ ಪ್ರೀತಿ.

ಇಲ್ಲಿ ಬರುವ ಪಾತ್ರಗಳೆಲ್ಲ ಪ್ರತ್ಯಕ್ಷವಾಗಿ ಜೈನಧರ್ಮದೊಂದಿಗೆ ತಳಕು ಹಾಕಿಕೊಂಡಿವೆ. ಇಡೀ ಕಾದಂಬರಿ ಜೈನಧರ್ಮದ ಸಂಪ್ರದಾಯಗಳ, ಆಚರಣೆಗಳ ನಡುವೆಯೆ ರಚನೆಗೊಂಡಿದೆ. ಆದರೆ ಈ ಅಧ್ಯಯನದ ಭಾಗವು ಕೇವಲ ಗಂಡು-ಹೆಣ್ಣಿನ ಸಂಬಂಧದ ಮೇಲೆ ಮಾತ್ರ ಕೇಂದ್ರೀಕೃತವಾಗಿರುವುದರಿಂದ 'ಜೈನಧರ್ಮ' ವಿಚಾರಗಳನ್ನು ಪರಿಗಣನೆಗೆ ತೆಗೆದುಕೊಂಡಿಲ್ಲ.

ಈ ಕಾದಂಬರಿಯ ಗಂಡು-ಹೆಣ್ಣುಗಳಾಗಿ ಪ್ರಧಾನವಾಗಿ ಇವರಿಗೆ ಸಹಾಯಕ ಪಾತ್ರಗಳಾಗಿ ಭರತ ಮತ್ತು ಅವನ ಹೆಂಡತಿ ಸುನಂದ, ಅಪ್ಪಾ ಸಾಹೇಬ ಮತ್ತು ಅವನ ಹೆಂಡತಿ ಲಕ್ಷುಂಬಾಯಿ, ನಿರ್ಮಲ ಕುಮಾರರು ಮತ್ತು ಅವರ ಮಗಳು ರೋಜ, ಅಪ್ಪಾ ಸಾಹೇಬರ ಅಕ್ರಮ ಸಂಬಂಧದ ಹೆಣ್ಣು ಸೋನುಬಾಯಿ ಇಲ್ಲಿ ಕಾಣಿಸಿಕೊಳ್ಳುತ್ತಾರೆ.

ಆ್ಯಡಂ ದೇಸಾಯಿ ಮತ್ತು ಆ್ಯನ್ ಈಗಲ್ಟನ್ ಇಬ್ಬರೂ **ಸೋಶಿಯಲ್ ಆಂಥ್ರಪಾಲಜಿ**ಯಲ್ಲಿ ಡಾಕ್ಟರೇಟ್ ವಿದ್ಯಾರ್ಥಿಗಳು ಬಿಚ್ಚು ಮನಸ್ಸಿನ ಸ್ನೇಹಿತರು. ಆ್ಯನ್‌ಗೆ ಜೈನ ಧರ್ಮದ ಬಗ್ಗೆ ಆಸಕ್ತಿ – ಕುತೂಹಲವಿದೆ. ಅದರ ತತ್ವ ಆಚಾರ, ನಂಬಿಕೆ ಇವುಗಳ ಬಗ್ಗೆ ಸಂಶೋಧನೆಗೆ ವಿಷಯ ಸಂಗ್ರಹಿಸುವ ಸಲುವಾಗಿ ತನ್ನ ಮಿತ್ರ ಆ್ಯಡಂ ದೇಸಾಯಿಯೊಡನೆ ಭಾರತಕ್ಕೆ ಬಂದಿದ್ದಾಳೆ. ಆ್ಯಡಂ, ಆ್ಯನ್‌ಗೆ ಸ್ನೇಹದ ಬಗ್ಗೆ ವಿವರಿಸುವುದು ಹೀಗೆ "ನಿನಗೆ ಎಳ್ಳಷ್ಟಾದರೂ ಅಸೂಯೆ, ಅನಿಸಿದರೆ, ಸಿಟ್ಟು ಬಂದರೆ ಕೆಟ್ಟೆನಿಸಿದರೆ ನಾ ಸುಮ್ಮನಾಗುವೆ ಇದು ಖಾತ್ರಿ... ನನ್ನ ನಿನ್ನ ಸ್ನೇಹಕ್ಕೆ ಎಳ್ಳಷ್ಟು ಭಾದೆ ಬಂದರೆ ತೀರಿತು ನನಗೆ ಸಹಿಸಲು ಅಸಾಧ್ಯ"(32) ಈ ರೀತಿ ಇರುವ ಆ್ಯಡಂ ಮತ್ತು ಆ್ಯನ್ ಜೈನಧರ್ಮದಲ್ಲಿ ಆಳವಾದ ಜ್ಞಾನವಿರುವ ನಿರ್ಮಲ ಕುಮಾರರನ್ನು ಭೇಟಿಯಾಗಲು ಬರುತ್ತಾರೆ. ಹಾಗೆಯೇ ಅವರ ಮಗಳು ರೋಜಾಳನ್ನು ಭೇಟಿ ಮಾಡುತ್ತಾರೆ. ಮೂರು ಜನ ಸೇರಿ ಧರ್ಮದ ಬಗ್ಗೆ ತತ್ವಜ್ಞಾನದ ಬಗ್ಗೆ ಮಾರ್ಕ್ಸಿಸಂ ಬಗ್ಗೆ ಚರ್ಚಿಸುತ್ತಾರೆ. ಜೈನಧರ್ಮದ ಬಗ್ಗೆ ತಿಳಿಯುತ್ತ ಅತಿಯಾದ ಶ್ರದ್ಧೆ ತೋರುತ್ತಿರುವ ಆ್ಯನ್ ಬಗ್ಗೆ ಆ್ಯಡಂಗೆ ಅಸಮಾಧಾನವಿದೆ. ಅವರಿಬ್ಬರ ಚರ್ಚೆಯಲ್ಲಿ

ಭರತ ಅವರೊಂದಿಗೆ ವಿದೇಶದಲ್ಲಿ ವ್ಯಾಪಾರ ಮಾಡುವ ಸಾಧ್ಯತೆಗಳ ಬಗ್ಗೆ ಚರ್ಚಿಸುತ್ತಾನೆ. ಹಾಗೆ ನೇಮಿನಾಥ-ನಿರ್ಮಲ ಕುಮಾರರನ್ನು ಸಂಪರ್ಕಿಸಿ ರೋಜಾಳನ್ನು ಮಾತನಾಡಿಸುತ್ತಾನೆ. ನಿರ್ಮಲ ಕುಮಾರರು ರೋಜಾಳನ್ನು ಆ್ಯಡಂಗೆ ಮದುವೆ ಮಾಡುವ ವಿಚಾರ ಮಾತನಾಡುತ್ತಾರೆ. ನೇಮಿನಾಥನೂ ಆ್ಯಡಂನೊಡನೆ ಈ ವಿಚಾರವಾಗಿ ಮಾತನಾಡುತ್ತಾರೆ. ಇದೆಲ್ಲ ತಿಳಿದ ಆ್ಯನ್ ಇವರ ಮಧ್ಯೆ ತಾನು ಬರಬಾರದೆಂದು ಹೇಳದೆ-ಕೇಳದೆ ಶ್ರವಣಬೆಳಗೊಳದಲ್ಲಿ ನಡೆಯುವ ಮಹಾ ಮಸ್ತಕಾಭಿಷೇಕಕ್ಕೆ ಹೊರಟು ಹೋಗುತ್ತಾಳೆ. ಅಲ್ಲಿಗೆ ಹೋದ ಮೇಲೆ ಆ್ಯಡಂಗೆ ಪತ್ರ ಬರೆಯುತ್ತಾಳೆ ಪತ್ರದಲ್ಲಿ "ಆ್ಯಡಂ ನಾ ನಿನಗೆ ಹೇಳದೆ, ಸರಿಯಾಗಿ ಬೀಳ್ಕೊಡದೆ ಬಂದೆ, ಸಾರಿ ಅದೇನಾಯಿತೆಂದರೆ ಇಲ್ಲಿಯ ಸ್ವಾಮಿಗಳ ಕಾರುಭಾರಿ – ಅವರೂ ತುಂಬಾ ಕೆಲಸ ಮಾಡ್ತಾರೆ ಅವರಷ್ಟು ಚಟುವಟಿಕೆಯ ಮನುಷ್ಯರನ್ನು ನಾನೆಲ್ಲಿಯೂ ನೋಡಿಲ್ಲ – ನನಗೆ (ನಾ ಹೋದ ಸಲ ಹೋದಾಗ, ನನ್ನ ವಿಳಾಸ ಕೊಟ್ಟು ಬಂದಿದ್ದೆ) ಭಟ್ಟಾರಕರು ಬೇಗ ಬರಲು ಹೇಳಿದ್ದಾರೆ ಅಂತ ಪತ್ರ ಬಂತು. ಇದೇ ಸವರ್ಣ ಸಂಧಿ ಎಂದು ನಾ ಎಲ್ಲಾ ಪ್ಯಾಕ್ ಮಾಡಿ ಇಲ್ಲಿಗೆ ಬಂದು ಬಿಟ್ಟೆ ಕ್ಷಮಿಸು. ಇಲ್ಲಿ ಬಂದ ಮೇಲೆ ಅನಿಸಿತು ಇದೊಂದು ರೀತಿ ಪಲಾಯನ ಎಂದು... ಇನ್ನು ಭೆಟ್ಟಿ ಯಾವಾಗೋ? ಏನೋ? ಮರಳಿ ಪತ್ರ ಬರಿ, ಗೋ ಅಹೆಡ್ – ರೋಜಾಳನ್ನು ಗೆಲ್ಲು... ವಿಜಯೀಭವ"[35] ಅದಕ್ಕೆ ಉತ್ತರವಾಗಿ ಆ್ಯಡಂ ಆ್ಯನ್‌ಗೆ ಪತ್ರ ಬರೆಯುತ್ತಾನೆ. ಪತ್ರದಲ್ಲಿ "ರೋಜ ನನ್ನ ವ್ಯಕ್ತಿತ್ವದ ಬಗ್ಗೆ ತುಂಬ ಸಂದೇಹ ತೋರಿದ್ದಾಳೆ ಅವಳಿಗೆ Sense of humour ಇದ್ದಂತಿಲ್ಲ. ನನ್ನ ಚೇಷ್ಟೆ ಮಾಡುವ ವೃತ್ತಿಗೆ ಅವಳು ನಾನು ಹಾಗೇ ಜೀವನದಲ್ಲಿ ಗಾಳಿ ಬಂದಂತೆ, ನೀರು ಹರಿದಂತೆ, ಹಾರುವ, ತೇಲುವ, ಮನುಷ್ಯ ಅಂತ ಅವಳ ಕಲ್ಪನೆ..."[36] ಹೀಗೆ ಆ್ಯಡಂ ಮತ್ತು ರೋಜಾ ಸಂಬಂಧ ನಿಧಾನವಾಗಿ ಜಾಳು ಜಾಳಾಗುತ್ತಿದ್ದಂತೆ ರೋಜಾ ಆ್ಯಡಂಗೆ ಪತ್ರ ಬರೆದು ಬೇಗ ಬರುವಂತೆ ವಿನಂತಿಸುತ್ತಾಳೆ, ತಕ್ಷಣ ಹೊರಟ ಆ್ಯಡಂ ರೋಜಾಳನ್ನು ಸಂಧಿಸುತ್ತಾನೆ. ರೋಜ ಆ್ಯಡಂಗೆ ಮಾರ್ಕ್ಸ್‌ವಾದಿಯಾದ ಅಧ್ಯಾಪಕ ಡಾ॥ ಮಾಧವನ್‌ನ ಪ್ರೇಮದ ಬಲೆಯಲ್ಲಿ ಬಿದ್ದಿರುವುದಾಗಿ ತಿಳಿಸುತ್ತಾಳೆ. ಇದರಿಂದ ಆ್ಯಡಂಗೆ, ಅವಳ ಜೊತೆಗಿನ ಸಂಬಂಧದ ಬಿಕ್ಕಟ್ಟು ಬಗೆಹರಿದಂತಾಗುತ್ತದೆ.

ಇದಾದ ನಂತರ ಆ್ಯನ್‌ಳಿಂದ ಪತ್ರ ಬಂದು ಭೆಟ್ಟಿಯಾಗುವಂತೆ ಕೇಳುತ್ತಾಳೆ ಅದಕ್ಕೆ ತಕ್ಷಣ ಆ್ಯಡಂ ಶ್ರವಣಬೆಳಗೊಳಕ್ಕೆ ಹೊರಡುತ್ತಾನೆ. ಅಲ್ಲಿ ಆ್ಯನ್‌ಳನ್ನು ಭೇಟಿಯಾಗಿ ಮುಕ್ತವಾಗಿ ಮಾತನಾಡುತ್ತಾನೆ. ತನ್ನ ಮತ್ತು ರೋಜಾಳ ಸಂಬಂಧ ಮುರಿದು ಬಿದ್ದುದರ ಬಗ್ಗೆ ವಿವರಿಸುತ್ತಾನೆ. ಅಲ್ಲಿಂದ ಮತ್ತೆ ಕೃಷ್ಣಾಪುರಕ್ಕೆ ಆ್ಯಡಂ ಬರುತ್ತಾನೆ. ಸ್ವಲ್ಪ ದಿನಗಳಾದ ಮೇಲೆ ಆ್ಯನ್ ಕೂಡ ಅಲ್ಲಿಂದ ಬರುತ್ತಾಳೆ. ಅವಳನ್ನು

ಮಠದವರು ಸದಸ್ಯ ಸ್ಥಾನದಿಂದ ಕಿತ್ತು ಹಾಕಿದ್ದಾರೆ. ಇದಕ್ಕೆಲ್ಲ ಬೇಸರಿಸದ ಆ್ಯನ್ ಅದನ್ನು ಆ್ಯಡಂನೊಂದಿಗೆ ನಗುತ್ತಲೇ ಹಂಚಿಕೊಳ್ಳುತ್ತಾಳೆ. ಅವರ ಮಾತುಗಳು ನಿಧಾನವಾಗಿ ಪ್ರೇಮದ ಕಡೆಗೆ, ಆಕರ್ಷಣೆಯ ಕಡೆಗೆ ಕನಸಿನ ಕಡೆಗೆ ತಿರುಗುತ್ತದೆ. ಆ್ಯನ್- ಆ್ಯಡಂನನ್ನು ಉದ್ದೇಶಿಸಿ "ಆ್ಯಡಂ, ನನಗೆ ನೆಲಕ್ಕೆ ಕಟ್ಟಿ ಹಾಕಲು ನೀನೇ ಬೇಕು. ಆದರೆ ಕನಸೂ ತುಂಬ ಸುಂದರವಾಗಿರುತ್ತದೆ ಆಕರ್ಷಕವಾಗಿರುತ್ತದೆ. ಕನಸು ಒಮ್ಮೊಮ್ಮೆ ಅಸ್ತಿತ್ವದ ನೋವುಗಳಿಂದ ದೂರ ಹೋಗಲು ಸಹಾಯ ಮಾಡುತ್ತದೆ." ಅದಕ್ಕೆ ಆ್ಯಡಂ "ಆ್ಯನ್, ನನಗೆ ನೀನು ಸದ್ಯ – ಸದ್ಯ ತುಂಬ ಸುಂದರಿಯಾಗಿ ಕಾಣಿಸ್ತೀ... ನಿನ್ನ ಮುಖಕ್ಕಿಂತ ನಿನ್ನ ಮನಸ್ಸೆಷ್ಟು ಛಂದವಿದೆ ಗೊತ್ತೇ ನಿನ್ನ ಆತ್ಮ (ಅದಿದ್ದರೆ) ಎಷ್ಟು ಆಕರ್ಷಕವಿದೆ ಗೊತ್ತೆ ?"[37] ಇದೆಲ್ಲ ಮುಗಿದ ಮೇಲೆ ಆ್ಯಡಂ ಮತ್ತು ಆ್ಯನ್ ಇಂಗ್ಲೆಂಡ್‌ಗೆ ಹೊರಡುತ್ತಾರೆ. ಇಬ್ಬರೂ ಈಗ ಪ್ರೀತಿಯಲ್ಲಿ ಬಿದ್ದಿದ್ದಾರೆ. ವಿಮಾನದಲ್ಲಿ ಹೋಗುವಾಗ ಆ್ಯನ್‌ಗೆ ಮತ್ತೆ ಹೊಸ ಆಲೋಚನೆ ಬಂದಿದೆ. ಮುಂದಿನ ಭಾರಿ ಭಾರತಕ್ಕೆ ಬಂದಾಗ **ಬೌದ್ಧ ಧರ್ಮ**ದ ಬಗ್ಗೆ ಅಧ್ಯಯನ ಮಾಡಿ ಈ ಜೈನ–ಬೌದ್ಧ ಧರ್ಮಗಳ ರಚನೆಗಳಲ್ಲಿಯ ಸಾಮ್ಯತೆ–ಭಿನ್ನತೆಯನ್ನು ಕೂಲಂಕುಷವಾಗಿ ಅಭ್ಯಸಿಸಲು ಮನಸ್ಸು ಮಾಡುತ್ತಾಳೆ. ಇದಕ್ಕೆ ಸಂಪೂರ್ಣವಾಗಿ ಆ್ಯಡಂ ಸಮ್ಮತಿಯೊಂದಿಗೆ ಕಾದಂಬರಿ ಮುಗಿಯುತ್ತದೆ.

'ಓಂ ಣಮೋ' ಕಾದಂಬರಿಯ ಗಂಡು–ಹೆಣ್ಣಿನ ಸಂಬಂಧದ ಹಿನ್ನೆಲೆಯಲ್ಲಿ ನೋಡಿದಾಗ ಈ ಸಮಾಜಕ್ಕೆ ಪ್ರಕೃತಿ–ಪುರುಷರ ಅವಶ್ಯಕತೆಗಳೆರಡು ಬೇಕಿದೆ ಎನಿಸುತ್ತದೆ. ಸ್ವತಂತ್ರ ಆಲೋಚನೆಗಳಲ್ಲಿರುವ ಆ್ಯಡಂ ಮತ್ತು ಆ್ಯನ್ ಆಧುನಿಕ ಭಾರತದ ಮುಂದಿನ ಪೀಳಿಗೆಯ ಮನಸ್ಥಿತಿಯಂತೆ ಭಾಸವಾಗುತ್ತಾರೆ, ಆರ್ಥಿಕವಾಗಿ, ಶೈಕ್ಷಣಿಕವಾಗಿ ತಾಂತ್ರಿಕವಾಗಿ ಬೆಳೆಯುತ್ತಿರುವ ಭಾರತ ತನ್ನ ಸಂಪ್ರದಾಯ ಬದ್ಧತೆಯನ್ನು ನಿಧಾನವಾಗಿ ಕಳೆದುಕೊಳ್ಳುತ್ತಿವೆ. ಮುಂದಿನ ಪೀಳಿಗೆಯ ಗಂಡು–ಹೆಣ್ಣುಗಳಲ್ಲಿ ದೇಶದ ಗಡಿರೇಖೆಗಳನ್ನು ಮೀರಿ ಪರಿಸರಕ್ಕೆ ಹೊಂದುವಂತೆ, ಸಂಪ್ರದಾಯವನ್ನು ಅರ್ಥೈಸಿಕೊಂಡೆ ಬದಲಾಗಬೇಕಾದ ಅನಿವಾರ್ಯತೆ ಎದುರಿಗಿದೆ. 'ಆಧುನೀಕರಣವೆಂದಾಗ ಅದು ಯಾವಾಗಲು ಗ್ರಾಹ್ಯವಾದ ಮೌಲ್ಯವೆಂದೇ ಹೇಳಲಾಗುವುದಿಲ್ಲ. ಜೈನಧರ್ಮವನ್ನು ಪಾಶ್ಚಾತ್ಯ ಕಣ್ಣುಗಳಿಂದ ನೋಡುವ ಆ್ಯನ್–ಆ್ಯಡಂರಿಗೆ ಜೈನ ಉತ್ಸವಗಳ, ವೈಭವೀಕರಣ ಅತಿಯಾಗಿ ಕಾಣುತ್ತದೆ. ಮಹಾಮಸ್ತಕಾಭಿಷೇಕ ಆ್ಯನ್‌ಳಿಗೆ 'ಒಂದು ಭಾರತೀಯ ಮಹಾ ಜಾತ್ರೆಯಂತೆ ಕಾಣುತ್ತದೆ. ಆ್ಯಡಂನಂತೂ ಈ ಉತ್ಸವಗಳನ್ನು ಟೂರಿಸ್ಟ್ ದೃಷ್ಟಿಯಿಂದಲೇ ನೋಡುತ್ತಿರುತ್ತಾನೆ. ಯಾವುದೇ ಸಂಸ್ಕೃತಿಯನ್ನು ಅದರ ಹೊರಗಿನಿಂದ ನೋಡುವುದರಲ್ಲಿ ಲಾಭವಿದ್ದೇ ಇರುತ್ತದೆ. ಆದರೆ ಆ್ಯಡಂ, ಆ್ಯನ್‌ರ ದೃಷ್ಟಿಯೇ

ಸರಿಯಾದುದು ಎಂದು ಹೇಳಲಾಗುವುದಿಲ್ಲ. ಇವರಿಗೆ ವಿರುದ್ಧವಾದ ನೀತಿಯನ್ನು ದೇವೆಂದ್ರಪ್ಪ-ಲಕ್ಷ್ಮಂಬಾಯಿ, ಅಪ್ಪಾ ಸಾಹೇಬ, ಹೆಂಡತಿ ಪದ್ಮಾವತಿಯಂಥವರ total insiderನಲ್ಲಿ ಕಾಣಬಹುದು. ಕಾದಂಬರಿಯಲ್ಲಿ ಈ ನೆಲೆಗಳು ಒಂದಕ್ಕೊಂದು ಪೂರಕವಾಗುತ್ತವೆ." (38)

---

## ಅಡಿ ಟಿಪ್ಪಣಿ

(1) ಮುಕ್ತಿ, ಶಾಂತಿನಾಥ ದೇಸಾಯಿ, ಬಾಪ್ಕೋ ಪ್ರಕಾಶನ, ಪುಟ-25
(2) ಮುಕ್ತಿ, ಶಾಂತಿನಾಥ ದೇಸಾಯಿ, ಬಾಪ್ಕೋ ಪ್ರಕಾಶನ, ಪುಟ-58
(3) ಮುಕ್ತಿ, ಶಾಂತಿನಾಥ ದೇಸಾಯಿ, ಬಾಪ್ಕೋ ಪ್ರಕಾಶನ, ಪುಟ-136
(4) ಮುಕ್ತಿ, ಶಾಂತಿನಾಥ ದೇಸಾಯಿ, ಬಾಪ್ಕೋ ಪ್ರಕಾಶನ, ಪುಟ-26
(5) ಮುಕ್ತಿ, ಶಾಂತಿನಾಥ ದೇಸಾಯಿ, ಬಾಪ್ಕೋ ಪ್ರಕಾಶನ, ಪುಟ-222
(6) ಮುಕ್ತಿ, ಶಾಂತಿನಾಥ ದೇಸಾಯಿ, ಬಾಪ್ಕೋ ಪ್ರಕಾಶನ, ಪುಟ-96
(7) ಮುಕ್ತಿ, ಶಾಂತಿನಾಥ ದೇಸಾಯಿ, ಬಾಪ್ಕೋ ಪ್ರಕಾಶನ, ಪುಟ-96
(8) ವಿಕ್ಷೇಪ, ಶಾಂತಿನಾಥ ದೇಸಾಯಿ, ಪ್ರಥಮ ಮುದ್ರಣ ಪಾಪ್ಯುಲರ್ ಪ್ರಕಾಶನ – ಪುಟ 49-50
(9) ವಿಕ್ಷೇಪ, ಶಾಂತಿನಾಥ ದೇಸಾಯಿ, ಪ್ರಥಮ ಮುದ್ರಣ ಪಾಪ್ಯುಲರ್ ಪ್ರಕಾಶನ – ಪುಟ 37
(10) ವಿಕ್ಷೇಪ, ಶಾಂತಿನಾಥ ದೇಸಾಯಿ, ಪ್ರಥಮ ಮುದ್ರಣ ಪಾಪ್ಯುಲರ್ ಪ್ರಕಾಶನ – ಪುಟ 257-258
(11) ವಿಕ್ಷೇಪ, ಶಾಂತಿನಾಥ ದೇಸಾಯಿ, ಪ್ರಥಮ ಮುದ್ರಣ ಪಾಪ್ಯುಲರ್ ಪ್ರಕಾಶನ – ಪುಟ 258
(12) ಸೃಷ್ಟಿ, ಶಾಂತಿನಾಥ ದೇಸಾಯಿ, ಪುಸ್ತಕ ಪ್ರಕಾಶನ 1979-ಪುಟ 25-26
(13) ಸೃಷ್ಟಿ, ಶಾಂತಿನಾಥ ದೇಸಾಯಿ, ಪುಸ್ತಕ ಪ್ರಕಾಶನ 1979-ಪುಟ 27
(14) ಸೃಷ್ಟಿ, ಶಾಂತಿನಾಥ ದೇಸಾಯಿ, ಪುಸ್ತಕ ಪ್ರಕಾಶನ 1979-ಪುಟ 103-104
(15) ಸೃಷ್ಟಿ, ಶಾಂತಿನಾಥ ದೇಸಾಯಿ, ಪುಸ್ತಕ ಪ್ರಕಾಶನ 1979-ಪುಟ 109
(16) ಸೃಷ್ಟಿ, ಶಾಂತಿನಾಥ ದೇಸಾಯಿ, ಪುಸ್ತಕ ಪ್ರಕಾಶನ 1979-ಪುಟ 119
(17) ಸಂಬಂಧ, ಶಾಂತಿನಾಥ ದೇಸಾಯಿ, ಐ.ಬಿ.ಹೆಚ್. ಪ್ರಕಾಶನ 1987 ಪುಟ 31-32
(18) ಸಂಬಂಧ, ಶಾಂತಿನಾಥ ದೇಸಾಯಿ, ಐ.ಬಿ.ಹೆಚ್. ಪ್ರಕಾಶನ 1987 ಪುಟ 33
(19) ಸಂಬಂಧ, ಶಾಂತಿನಾಥ ದೇಸಾಯಿ, ಐ.ಬಿ.ಹೆಚ್. ಪ್ರಕಾಶನ 1987 ಪುಟ 150
(20) ಸಂಬಂಧ, ಶಾಂತಿನಾಥ ದೇಸಾಯಿ, ಐ.ಬಿ.ಹೆಚ್. ಪ್ರಕಾಶನ 1987
(21) ಸಂಬಂಧ, ಶಾಂತಿನಾಥ ದೇಸಾಯಿ, ಐ.ಬಿ.ಹೆಚ್. ಪ್ರಕಾಶನ – ಹಿಂದಿನ ರಕ್ಷಾಪುಟದ ಹಿನ್ನುಡಿಯಲ್ಲಿ (ಡಾ॥ ಯು.ಆರ್. ಅನಂತಮೂರ್ತಿ ಕಾದಂಬರಿಯ ಬಗ್ಗೆ ಪತ್ರ ಬರೆದದ್ದು)
(22) ಬೀಜ – ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್, ಮುದ್ರಣ 2002, ಪುಟ 19
(23) ಬೀಜ – ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್, ಮುದ್ರಣ 2002, ಪುಟ 171
(24) ಬೀಜ – ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್, ಮುದ್ರಣ 2002, ಪುಟ 211
(25) ಅಂತರಾಳ – ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್ – 2001 – ಪುಟ-13
(26) ಅಂತರಾಳ – ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್ – 2001 – ಪುಟ-55
(27) ಅಂತರಾಳ – ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್ – 2001 – ಪುಟ-216
(28) ಅಂತರಾಳ – ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್ – 2001 – ಪುಟ-217
(29) ಅಂತರಾಳ – ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್ – 2001 – ಪುಟ-217
(30) ಅಂತರಾಳ – ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್ – 2001 – ಪುಟ-237-238
(31) ಅಂತರಾಳ – ಶಾಂತಿನಾಥ ದೇಸಾಯಿ, ಸಪ್ನ ಬುಕ್ ಹೌಸ್ – 2011 – ಹಿನ್ನುಡಿ ಮಾರುತಿ ಶಾನ್‌ಭಾಗ್ ಪುಟ 241
(32) ಓಂ ಣಮೋ – ಶಾಂತಿನಾಥ ದೇಸಾಯಿ – ಸಪ್ನ ಬುಕ್ ಹೌಸ್ 2010 – ಪುಟ 46
(33) ಓಂ ಣಮೋ – ಶಾಂತಿನಾಥ ದೇಸಾಯಿ – ಸಪ್ನ ಬುಕ್ ಹೌಸ್ 2010 – ಪುಟ 47
(34) ಓಂ ಣಮೋ – ಶಾಂತಿನಾಥ ದೇಸಾಯಿ – ಸಪ್ನ ಬುಕ್ ಹೌಸ್ 2010 – ಪುಟ 98
(35) ಓಂ ಣಮೋ – ಶಾಂತಿನಾಥ ದೇಸಾಯಿ – ಸಪ್ನ ಬುಕ್ ಹೌಸ್ 2010 – ಪುಟ 202
(36) ಓಂ ಣಮೋ – ಶಾಂತಿನಾಥ ದೇಸಾಯಿ – ಸಪ್ನ ಬುಕ್ ಹೌಸ್ 2010 – ಪುಟ 208
(37) ಓಂ ಣಮೋ – ಶಾಂತಿನಾಥ ದೇಸಾಯಿ – ಸಪ್ನ ಬುಕ್ ಹೌಸ್ 2010 – ಪುಟ 244
(38) ಶಾಂತಿನಾಥ ದೇಸಾಯಿ – ಜಿ.ಎಸ್. ಅಮೂರ, ಸಾಹಿತ್ಯ ಅಕಾಡೆಮಿ 2000 – ಪುಟ 68

## ಅಧ್ಯಾಯ 6 : ಸಮಾರೋಪ

ಶಾಂತಿನಾಥ ದೇಸಾಯಿ ಅವರು ಕನ್ನಡ ಸಾಹಿತ್ಯ ಲೋಕದಲ್ಲಿ ಪ್ರಮುಖ ಬರಹಗಾರರಾಗಿ ಗುರುತಿಸಿಕೊಂಡವರು. ನವ್ಯ ಪರಂಪರೆಯೊಂದು ಕನ್ನಡದಲ್ಲಿ ಆಗ ತಾನೆ ಮೂಡುತ್ತಿದ್ದ ಹೊಸ ಆವೇಶಗಳಿಗೆ ಚೌಕಟ್ಟನ್ನು ಒದಗಿಸುವ ಸಂದರ್ಭದಲ್ಲೆ ಶಾಂತಿನಾಥ ದೇಸಾಯಿ ಮುಕ್ತಿಯ ಮೂಲಕ ನವ್ಯ ಪರಂಪರೆಯನ್ನು ಕನ್ನಡದಲ್ಲಿ ಉದ್ಘಾಟಿಸಿದರು. ವಸ್ತು, ಭಾಷೆ, ಶೈಲಿಗಳಲ್ಲಿ ವಿನೂತನ ಸಾಧ್ಯತೆಗಳನ್ನು ನವ್ಯ ಸಾಹಿತ್ಯ ಸಂದರ್ಭದಲ್ಲಿ ಶೋಧಿಸಿ ಕನ್ನಡಕ್ಕೆ ಕೊಟ್ಟಿದ್ದು ದೇಸಾಯಿ ಅವರ ಪ್ರಮುಖ ಕೊಡುಗೆ ಅವರ ಸಣ್ಣಕತೆಗಳಾಗಲಿ, ಕಾದಂಬರಿಗಳಾಗಲಿ ವಿಮರ್ಶೆಗಳಾಗಲಿ ಅಥವಾ ಬಿಡಿ ಬರಹಗಳೆ ಆಗಲಿ ಅವುಗಳಲ್ಲಿ ನವ್ಯತೆಯ ಅಂಶಗಳು ಗಾಢವಾಗಿವೆ.

ಶಾಂತಿನಾಥ ದೇಸಾಯಿ ಅವರ ನವ್ಯ ಪರಂಪರೆಯ ಕಾಲಘಟ್ಟದಲ್ಲಿ ಕಾಣಿಸಿಕೊಂಡ ಇತರ ಕನ್ನಡ ನವ್ಯ ಬರಹಗಾರರೆಂದರೆ ಅನಂತಮೂರ್ತಿ, ತೇಜಸ್ವಿ, ಲಂಕೇಶ್, ಅಡಿಗ ಮುಂತಾದವರು. ಆದರೆ ಅನಂತಮೂರ್ತಿ, ತೇಜಸ್ವಿ, ಲಂಕೇಶರಷ್ಟು ಜನಪ್ರಿಯತೆಯನ್ನು ಶಾಂತಿನಾಥ ದೇಸಾಯಿ ಕನ್ನಡದಲ್ಲಿ ಪಡೆಯಲಾಗಲಿಲ್ಲ. ಇದಕ್ಕೆ ಹಲವಾರು ಕಾರಣಗಳಿವೆ. ಮೊದಲಿಗೆ ಶಾಂತಿನಾಥ ದೇಸಾಯಿ ಅವರು ಕರ್ನಾಟಕದಿಂದ ಬಹುಕಾಲ ಹೊರಗುಳಿದಿದ್ದರು ಮತ್ತು ಅವರ ಬರವಣಿಗೆಗಳು ನಿಯಮಿತವಾಗಿ ಪತ್ರಿಕೆಗಳಲ್ಲಿ ಬರದ ಕಾರಣ ಅವರು ಮೇಲೆ ಹೆಸರಿಸಿದ ಬರಹಗಾರರಷ್ಟು ಜನಪ್ರಿಯರಾಗಲಿಲ್ಲ. ಎರಡನೆಯದಾಗಿ ತೇಜಸ್ವಿ, ಲಂಕೇಶ್, ಅನಂತಮೂರ್ತಿಯವರಷ್ಟು ಪ್ರಮಾಣದ ಸಾಹಿತ್ಯ ಸೃಷ್ಟಿ ದೇಸಾಯಿ ಅವರಿಗೆ ಸಾಧ್ಯವಾಗಲಿಲ್ಲ. ಮುಕ್ತಿಯಿಂದ-ಓಂ ಣಮೋವರೆಗೂ ಅವರ ಎಲ್ಲಾ ಕಾದಂಬರಿಗಳು ನವ್ಯ ಪ್ರಕಾರದಲ್ಲಿಯೇ ಮೂಡಿಬಂದಿವೆ. ನವ್ಯ ಸಂಪ್ರದಾಯದ ಎಲ್ಲಾ ವಿವರಗಳನ್ನು ಸಾಧ್ಯತೆಗಳನ್ನು ಮತ್ತು ಪ್ರೇರಣೆಗಳನ್ನು ಈ ಸಂಪ್ರಬಂಧದಲ್ಲಿ ಅದರಲ್ಲೂ ಕಾದಂಬರಿಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ.

ಸ್ವಾತಂತ್ರೋತ್ತರ ಭಾರತದ ಕನ್ನಡ ಸಾಹಿತ್ಯವು 'ಅಸ್ತಿತ್ವವಾದಿ' ನೆಲೆಯಲ್ಲಿ ಭಾಗಶ:, ಅದರಲ್ಲೂ ನವ್ಯರಲ್ಲಿ ಮೂಡಿಬಂದಿದೆ. ಶಾಂತಿನಾಥ ದೇಸಾಯಿ ಅವರ ಕಾದಂಬರಿಗಳು ಅಸ್ತಿತ್ವವಾದಿ ಅಡಿಪಾಯದಲ್ಲೆ ನರಳುತ್ತವೆ, ಮಿಡಿಯುತ್ತವೆ, ಅಸ್ತಿತ್ವವಾದದ ಕಾಂತಶಕ್ತಿಯಿಂದ ಬಿಡಿಸಿಕೊಳ್ಳಲಾಗದೆ ತೊಳಲಾಡುತ್ತವೆ. 'ಸೃಷ್ಟಿ' ಕಾದಂಬರಿಯ 'ಶಕುಂತಲೆ' ಹೇಳುವಂತೆ "ಈ ಜೀವನಕ್ಕೆ ಕೇಂದ್ರವೇ ಇಲ್ಲ" ಎಂಬಂತೆ ಭಾಸವಾಗುತ್ತದೆ. ದೇಸಾಯಿ ಅವರೇ ತಮ್ಮ "ಅಸ್ತಿತ್ವವಾದ ಹಾಗೂ ಕನ್ನಡ ಸಾಹಿತ್ಯ"

ಎಂಬ ಲೇಖನದಲ್ಲಿ "ಸ್ವತಂತ್ರದ ನಂತರ – ಗಾಂಧಿ ಹತ್ಯೆಯ ನಂತರ ನಮ್ಮ ದೇಶದಲ್ಲಿ ಬಂದಂಥ ವಿಚಿತ್ರ ರೀತಿಯ ಅಸ್ತವ್ಯಸ್ತತೆಯ... ಹೊಸ ರಾಜಕೀಯ-ಸಾಮಾಜಿಕ ವಾತಾವರಣದಲ್ಲಿ ಸಂವೇದನಾಶೀಲ ಲೇಖಕ ದಿಙ್ಮೂಢನಾಗಿ ವ್ಯಕ್ತಿ ನಿಷ್ಠತೆಯನ್ನು ಅವಲಂಬಿಸಬೇಕಾಯಿತು. ಆಗ ಈ ಸಂಪೂರ್ಣ ವ್ಯಕ್ತಿನಿಷ್ಠರಾದ ತತ್ವಜ್ಞಾನವಾದಂಥ ಅಸ್ತಿತ್ವವಾದ ನಮ್ಮ ತರುಣ ಲೇಖಕರಿಗೆ ನೆಮ್ಮದಿ ತಂದಿತು."(1) ಈ ಮಾತುಗಳಿಂದಲೇ ಅವರು ನವ್ಯರ ಎಲ್ಲಾ ಆಶಯಗಳನ್ನು ಪ್ರಮುಖವಾಗಿ ಅಸ್ತಿತ್ವವಾದವನ್ನು ತಮ್ಮ ಕಾದಂಬರಿಗಳ ಮೂಲ ನೆಲೆಯಾಗಿ ಮಾಡಿಕೊಂಡರು ಎಂದರೆ ತಪ್ಪಾಗಲಾರದು. ಈ ಎಲ್ಲಾ ಹಿನ್ನೆಲೆಯಲ್ಲಿ ಶಾಂತಿನಾಥ ದೇಸಾಯಿ ಅವರು ಕನ್ನಡ ಕಾದಂಬರಿ ಲೋಕದ ಅಮರ ಲೇಖಕರೆನಿಸಿದ್ದಾರೆ. ಈ ಅಧ್ಯಯನದ ಮೂಲಕ ನವ್ಯ ಬರಹಗಾರರಲ್ಲಿ ಅವರು ಎಂತಹ ವಿಶಿಷ್ಟ ಸ್ಥಾನವನ್ನು ಪಡೆದಿದ್ದರು ಎಂದು ಶೋಧಿಸಲಾಗಿದೆ. ನವ್ಯ ಸಾಹಿತ್ಯದ ಸೈದ್ಧಾಂತಿಕ ನಿಲುವುಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿರುವುದರಿಂದ ಹೊಸ ಒಳನೋಟಗಳನ್ನು ಈ ಅಧ್ಯಯನ ಕಂಡುಕೊಂಡಿದೆ.

ಶಾಂತಿನಾಥ ದೇಸಾಯಿ ಅವರು ತಮ್ಮ ಕಾದಂಬರಿ ಜಗತ್ತಿನಲ್ಲಿ ಗಂಡು-ಹೆಣ್ಣುಗಳ ಸಂಬಂಧವನ್ನು ಅತ್ಯಂತ ಸೂಕ್ಷ್ಮವಾಗಿ ವಿವೇಚಿಸಿದ್ದಾರೆ. ಇವರ ಕಾದಂಬರಿಗಳಲ್ಲಿ ಬರುವ ಗಂಡು-ಹೆಣ್ಣುಗಳು ಪ್ರಗತಿಪರ ಸಮಾಜದ ಮೌಖಿಕ ಅಭಿವ್ಯಕ್ತಿಯಾಗಿ ಕಂಡುಬಂದಿದ್ದಾರೆ. ಈ ಪಾತ್ರಗಳು ಚೆನ್ನಾಗಿ ಶಿಕ್ಷಣ ಪಡೆದು ಅಭಿವೃದ್ಧಿ ಸಮಾಜದ ಎಲ್ಲಾ ಓರೆ-ಕೋರೆಗಳನ್ನು ಪ್ರತಿಬಿಂಬಿಸಿದ್ದಾರೆ. ಶ್ರೀಮಂತ ಸಮುದಾಯದ ಉನ್ನತ ಶಿಕ್ಷಣ ಪಡೆದ ಇಲ್ಲಿರುವ ಪ್ರಮುಖ ಗಂಡು-ಹೆಣ್ಣುಗಳು ತಮ್ಮ ಅಸ್ತಿತ್ವವನ್ನು ಮತ್ತು ಅಸ್ಮಿತೆಯನ್ನು ಉಳಿಸಿಕೊಳ್ಳಲು ಹೋರಾಡುತ್ತಾರೆ. ಇದಕ್ಕೆ ಅವರು ಬೆಳೆದು ಬಂದ ಪರಿಸರ, ಶಿಕ್ಷಣ, ಸಮಾಜಮುಖಿ ಚಿಂತನೆ ಹಾಗೂ ಕಥಾ ಹಿನ್ನೆಲೆ ಪರಿಪೂರ್ಣವಾದ ಸಹಕಾರವನ್ನು ಇವರಿಗೆ ಒದಗಿಸಿದೆ. 'ಮುಕ್ತಿ' ಕಾದಂಬರಿಯ ಗೌರೀಶ-ಕಾಮಿನಿ-ಡಾಲಿಯಿಂದ ಹಿಡಿದು 'ಓಂ ಣಮೋ' ಕಾದಂಬರಿಯ ಆ್ಯಡಂ ದೇಸಾಯಿ- ಆ್ಯನ್ ಈಗಲ್ಟನ್-ರೋಜಾವರೆಗೂ ಪಾತ್ರಗಳು ಗಮನಸೆಳೆಯುತ್ತವೆ. ಹಾಗೂ ಮನಸ್ಸಿನಲ್ಲಿ ನಿಲ್ಲುತ್ತವೆ. ನವೋದಯ ಪರಂಪರೆಯ ಸಮಷ್ಠಿಪ್ರಜ್ಞೆ ಇಲ್ಲಿ ವ್ಯಷ್ಠಿಪ್ರಜ್ಞೆಯಾಗಿ ಜಾಗೃತಗೊಂಡಿದೆ. ಗಂಡಿನ ಯೋಚನಾ ಲಹರಿಗಳು ಮತ್ತು ಹೆಣ್ಣಿನ ಯೋಚನಾ ಲಹರಿಗಳು ಆಧುನಿಕ ಕಾಲದ ಅವಸರ, ಒತ್ತಡ, ತಲ್ಲಣ, ಏಕಾಕಿತನ, ವಿಮುಖತೆ, ಆತ್ಮ ಪ್ರತಿಷ್ಠೆಯಂತಹ ಮನೋಭೂಮಿಕೆಯ ತಳಪಾಯದ ಮೇಲೆ ರೂಪಗೊಂಡ ಬೊಂಬೆಗಳಂತೆ ಕಂಗೊಳಿಸುತ್ತಾರೆ. ಸ್ತ್ರೀ-ಪುರುಷ ಸಂಬಂಧಗಳು ಅನ್ಯೋನ್ಯತೆಯ ಕೊರತೆಯನ್ನು ನೀಗಿಕೊಳ್ಳುವುದಕ್ಕೆ

ಪಲಾಯನ ಸಂಸ್ಕೃತಿಯೆಡೆಗೆ ಮುಖಮಾಡುತ್ತವೆ. ಸಮಾಜವೊಂದು ತನ್ನ ಒಡಲಲ್ಲಿ ಅಡಗಿಸಿಕೊಂಡಿರುವ ಎಲ್ಲಾ ಸಂಕಟಗಳನ್ನು, ಅಂದರೆ ಬಡತನ, ನಿರುದ್ಯೋಗದಂತಹ ಸಮಸ್ಯೆಗಳನ್ನು ಶಾಂತಿನಾಥ ದೇಸಾಯಿ ಅವರ ಕಾದಂಬರಿಗಳಲ್ಲಿ ಕಾಣಲಾಗದು. ಆದರೆ ಶ್ರೀಮಂತ ಸಂಸ್ಕೃತಿಯಲ್ಲಿನ ಹಣ, ವ್ಯವಹಾರ, ಅಧಿಕಾರ, ಐ.ಎ.ಎಸ್. ಶಿಕ್ಷಣ, ಉನ್ನತ ವ್ಯಾಸಂಗ, ವಿದೇಶ ಪ್ರಯಾಣ ಎಲ್ಲವುಗಳನ್ನು ಕಾದಂಬರಿಯ ಪಾತ್ರಗಳು ನಿರ್ವಹಿಸುತ್ತವೆ. ಇದಕ್ಕೆ ಬಹುಮುಖ್ಯ ಕಾರಣ ಲೇಖಕರೂ ಕೂಡ ಇಂತಹ ಶ್ರೀಮಂತ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬೆಳೆದು ಬಂದವರು. ಮತ್ತು ತಮ್ಮ ಅನುಭವಗಳಿಗೆ ಕಾದಂಬರಿಯ ರೂಪ ಕೊಟ್ಟಿರುವುದೇ ಬಹು ಮುಖ್ಯ ಕಾರಣವಾಗಿದೆ. ಇದು ಶಾಂತಿನಾಥ ದೇಸಾಯಿ ಅವರ ವಿಶಿಷ್ಟತೆಯೂ ಹೌದು, ಮಿತಿಯೂ ಹೌದು.

ಶಾಂತಿನಾಥ ದೇಸಾಯಿ ಅವರು ತಮ್ಮ ಕಾದಂಬರಿಗಳಲ್ಲಿ ಇಂತಹ ಸ್ತ್ರೀ-ಪುರುಷ ಸಂಬಂಧಗಳ ಹಿನ್ನೆಲೆಯಲ್ಲಿ ಕಾದಂಬರಿ ರಚನೆಗೆ ಇಳಿದಿದ್ದು ಏಕೆಂದು ಪ್ರಶ್ನಿಸಿಕೊಂಡರೆ ಅದಕ್ಕೆ ಅವರೇ ಕೊಡವು ಉತ್ತರ "ನನ್ನ ಮೇಲೆ ಪ್ರಭಾವ ಬೀರಿದ ಲೇಖಕರಲ್ಲಿ ಹೆಚ್ಚಾಗಿ ಪರದೇಶದವರೇ. ಕನ್ನಡದ ಯಾವ ಕಾದಂಬರಿಕಾರನು ನನಗೆ ಸೇರಿರಲಿಲ್ಲ. ಮರಾಠಿಯಲ್ಲಿ ಶ್ರೀ ನಾ. ಪೇಂಡ್ಸೆಯವರ ಕಾದಂಬರಿಗಳು ಸ್ವಲ್ಪ ಸೇರುತ್ತಿದ್ದವು. ಆದರೆ ನಮಗೆ ನಿಜವಾಗಿ ಸೇರಿದ ಕಾದಂಬರಿಕಾರರೆಂದರೆ ಮೊದಲಿಗೆ ಡಾಸ್ಟವಸ್ಕಿ, ನಂತರ ಆಲ್ಡಸ್ ಹಕ್ಸ್ಲಿ, ಸ್ಟೈನ್ ಬೆಕ್, ಲಾರೆನ್ಸ್, ಫ್ರಾನ್ಸ್ವಾ ಮಾರಿಯರ್, ಆಂಡ್ರೆಜೀದ್ ಇತ್ಯಾದಿ. ಡಾಸ್ಟವಸ್ಕಿಯ ಕತೆಯ ಓಘ, ಮನೋವೈಜ್ಞಾನಿಕ ಗೂಢತೆಗಳು, ತಾತ್ವಿಕ ಚಿಂತನೆ... ವೈಚಾರಿಕ ಚರ್ಚೆಗಳು, ಲಾರೆನ್ಸ್‌ನ ಮಾನವೀ ಸಾಫಲ್ಯದ ತತ್ವಜ್ಞಾನ; ಮಾರಿಯಾಕ್‌ನ ಮಾನವೀ ಸಂಬಂಧಗಳ ಸೂಕ್ಷ್ಮತೆ, ಆಂಡ್ರಿ ಜಾದ್‌ನ ಪ್ರಮಾಣಿಕತೆ ಇತ್ಯಾದಿ ನನ್ನ ಮನಸ್ಸಿನಲ್ಲಿ ಪ್ರಭಾವ ಕೇಂದ್ರಗಳಾಗಿ ಕೆಲಸ ಮಾಡಿದವೆಂದು ನನಗೆ ನೆನಪು."(2)

ಶಾಂತಿನಾಥ ದೇಸಾಯಿ ಅವರ ಕಾದಂಬರಿಗಳಲ್ಲೆಲ್ಲ ಮಾರ್ಕ್ಸಿಸಂ ಬಗ್ಗೆ, ಕಮ್ಯುನಿಸಂ ಬಗ್ಗೆ ಮತ್ತು ಅದರ ಜ್ವಲಂತ ಹೋರಾಟದ ಬಗ್ಗೆ ಒಂದು ಸ್ಥಾನವನ್ನಂತೂ ಕಲ್ಪಿಸಿದ್ದಾರೆ. ಅವುಗಳನ್ನು ಸೂಕ್ಷ್ಮವಾಗಿ ಹೇಳಲೂ ಕೂಡ ಅವರ ಕಾದಂಬರಿಗಳು ಪ್ರಯತ್ನಿಸುತ್ತವೆ. ಈ ಅಂಶಗಳನ್ನು ಅವರ ಏಳೂ ಕಾದಂಬರಿಗಳಲ್ಲಿ ಗುರುತಿಸಬಹುದು. ಅಂದಿನ ಸಮಾಜದ ಜನಪರ ಕಾಳಜಿಗಳನ್ನು ಕಾದಂಬರಿಗಳ ಪಾತ್ರಗಳ ಮೂಲಕ ಪ್ರತಿಪಾದಿಸಿದವರು ಶಾಂತಿನಾಥ ದೇಸಾಯಿ. ಅಭಿವೃದ್ಧಿಶೀಲ ರಾಷ್ಟ್ರವಾದ ಭಾರತ ಆಗ ತಾನೆ ತನ್ನನ್ನು ಮುಕ್ತ ವಿಶ್ವದೆಡೆಗೆ ಮತ್ತು ಆಧುನಿಕ ತಾಂತ್ರಿಕತೆಗೆ ಒಡ್ಡಿಕೊಳ್ಳುತ್ತಿತ್ತು. ಅದರಿಂದಾದ ಸಾಮಾಜಿಕ ಬದಲಾವಣೆಗಳನ್ನು

ಸೂಕ್ಷ್ಮವಾಗಿ ಕಾದಂಬರಿಗಳ ಮೂಲಕ ಅವಲೋಕಿಸಿದ ದೇಸಾಯಿ ಮೇಲ್ಮಧ್ಯಮ ವರ್ಗದ ಸಂಘರ್ಷಗಳನ್ನು ಕಾದಂಬರಿಗಳ ಮೂಲಕ ಅಭಿವ್ಯಕ್ತಿಸಿದರು. ಅಭಿವೃದ್ಧಿಶೀಲ ರಾಷ್ಟ್ರವಾದ ಭಾರತ ತನ್ನ ಸಂಪ್ರದಾಯ ಬದ್ಧತೆಯನ್ನು ನಿಧಾನವಾಗಿ ಸಡಿಲಸಿಕೊಳ್ಳುತ್ತ, ಆಧುನೀಕರಣಕ್ಕೆ ತನ್ನನ್ನು ತೆರೆದುಕೊಳ್ಳುವ ಸಂಕ್ರಮಣ ಕಾಲಘಟ್ಟದ ದರ್ಶನವನ್ನು ಕಾದಂಬರಿಗಳ ಮೂಲಕ ಹಿಡಿದಿಡಲು ಪ್ರಯತ್ನಿಸಿದರು. ಶಾಂತಿನಾಥ ದೇಸಾಯ ಅವರು ತಮ್ಮ ಕಾದಂಬರಿಗಳ ಮೂಲಕ ಒಂದು ಸ್ವಸ್ಥ-ಧರ್ಮ ನಿರಪೇಕ್ಷ, ಅಜಾತಿ ವಾತಾವರಣವನ್ನು ನಿರ್ಮಿಸಲು ಪ್ರಯತ್ನಿಸಿದ್ದಾರೆ. ಇಲ್ಲಿ ಬರುವ ಸ್ತ್ರೀ-ಪುರುಷ ಪಾತ್ರಗಳಿಗೆ ಧರ್ಮ, ಜಾತಿ ದೊಡ್ಡ ಸಮಸ್ಯೆಯಾಗಿ ಕಾಣುವುದೇ ಇಲ್ಲ. ಇದು ಕಾದಂಬರಿಕಾರರ ಶಕ್ತಿಯೂ ಹೌದು.

---

**ಅಡಿ ಟಿಪ್ಪಣಿ**

(1) ಶಾಂತಿನಾಥ ದೇಸಾಯಿ: ಜಿ.ಎಸ್. ಅಮೂರ, ಸಾಹಿತ್ಯ ಅಕಾಡೆಮಿ, 2000-ಪುಟ 27
(2) ಶಾಂತಿನಾಥ ದೇಸಾಯಿ: ಜಿ.ಎಸ್. ಅಮೂರ, ಸಾಹಿತ್ಯ ಅಕಾಡೆಮಿ, 2000-ಪುಟ 29

## ಗ್ರಂಥಋಣ


1. ಶಾಂತಿನಾಥ ದೇಸಾಯಿ ವಾಚಿಕೆ
ಡಾ॥ ರಾಮಚಂದ್ರದೇವ
ನುಡಿ ಪುಸ್ತಕ, ಬೆಂಗಳೂರು.
2010

2. ಶಾಂತಿನಾಥ ದೇಸಾಯಿ
ಜಿ.ಎಸ್. ಅಮೂರ
ಸಾಹಿತ್ಯ ಅಕಾಡೆಮಿ, ಬೆಂಗಳೂರು.
2000

3. ವಿಮರ್ಶೆಯ ವಿನಯ-ಕಾದಂಬರಿ
ಕೀರ್ತಿನಾಥ ಕುರ್ತಕೋಟಿ
ಮನೋಹರ ಗ್ರಂಥಮಾಲೆ
ಧಾರವಾಡ.-1982

4. ಕನ್ನಡ ಕಥನ ಸಾಹಿತ್ಯ: ಕಾದಂಬರಿ
ಜಿ.ಎಸ್. ಅಮೂರ
ಶ್ರೀಹರಿ ಪ್ರಕಾಶನ, ಧಾರವಾಡ.
1994

5. ಕನ್ನಡ ನವ್ಯ ಕಾದಂಬರಿಗಳು
ಡಾ॥ ಕೆ. ವಿಜಯಶ್ರೀ
ಶ್ರೀ ರಾಮಕೃಷ್ಣ ಪ್ರಕಾಶನ,
ಬೆಂಗಳೂರು.
2002

6. ನವ್ಯ ವಿಮರ್ಶೆ
ಗಿರಡ್ಡಿ ಗೋವಿಂದರಾಜು
ಮೈಸೂರು ಪ್ರಿಂಟಿಂಗ್ ಅಂಡ್
ಪಬ್ಲಿಶಿಂಗ್ ಹೌಸ್, ಸಾಗರ.
1975

7. ಶತಮಾನದ ಸಣ್ಣಕತೆಗಳ ಸಮೀಕ್ಷೆ
ಡಾ॥ ಕರೀಗೌಡ ಬೀಚನಹಳ್ಳಿ
ಕರ್ನಾಟಕ ಸಾಹಿತ್ಯ ಅಕಾಡೆಮಿ,
ಬೆಂಗಳೂರು.
2003

8. ವ್ಯಷ್ಟಿ ಮತ್ತು ಸಮಷ್ಟಿ
ಡಾ॥ ಕರೀಗೌಡ ಬೀಚನಹಳ್ಳಿ
ಪ್ರಸಾರಾಂಗ,
ಬೆಂ.ವಿ.ವಿ. ಬೆಂಗಳೂರು.
1991

9. ಮುಕ್ತಿ
ಶಾಂತಿನಾಥ ದೇಸಾಯಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು.
1983

10. ವಿಕ್ಷೇಪ
ಶಾಂತಿನಾಥ ದೇಸಾಯಿ
ಪಾಪ್ಯುಲರ್ ಪ್ರಕಾಶನ, ಬಾಂಬೆ
1971

11. ಸೃಷ್ಟಿ
ಶಾಂತಿನಾಥ ದೇಸಾಯಿ,
ಮನೋಹರ ಮುದ್ರಣಾಲಯ,
ಧಾರವಾಡ.
1979

12. ಸಂಬಂಧ
ಶಾಂತಿನಾಥ ದೇಸಾಯಿ
ಐ.ಬಿ.ಹೆಚ್. ಪ್ರಕಾಶನ,
ಬೆಂಗಳೂರು.
1987

13. ಬೀಜ
ಶಾಂತಿನಾಥ ದೇಸಾಯಿ
ಸಪ್ನ ಬುಕ್ ಹೌಸ್,
ಬೆಂಗಳೂರು.
2002

14. ಅಂತರಾಳ
ಶಾಂತಿನಾಥ ದೇಸಾಯಿ
ಸಪ್ನ ಬುಕ್ ಹೌಸ್,
ಬೆಂಗಳೂರು.
2001

15. ಓಂ ಣಮೋ
ಶಾಂತಿನಾಥ ದೇಸಾಯಿ
ಸಪ್ನ ಬುಕ್ ಹೌಸ್
ಬೆಂಗಳೂರು.
2010

